# ಕೊರವಂಜಿ



ಸಂಪಾದಕರು :

ಶ್ರೀ॥ ರಾ. ಶಿ.

ಬರಹಗಾರರು :

ಶ್ರೀ॥ ದಾಶರಥಿ ದೀಕ್ಷಿತ್

ಶ್ರೀ॥ ಕುಮಾರ್

ಶ್ರೀ॥ ರಾಮಣ್ಣ

ಶ್ರೀ॥ ಪಾಟ-ಳಿ

ಶ್ರೀ॥ ಹಾ. ರಾ

ಶ್ರೀ॥ ಮೂಷಿಕ

ಶ್ರೀ॥ ಎ. ಎಸ್. ರಾಮಕೃಷ್ಣ

ಶ್ರೀಮತಿ ಸರೋಜಿನಿ ಆರೂರ್

ಶ್ರೀ॥ ಪ್ರಸಾದ್

ಶ್ರೀ॥ ದೇವಣ್ಣ

ಶ್ರೀ॥ ಹೇಮ

ಶ್ರೀ॥ ಅಸುರ

ಇತ್ಯಾದಿ, ಇತ್ಯಾದಿ.

ತಿಳಿನಗೆಯ ಮಾಸಪತ್ರಿಕೆ

ರಸಿಕರಿಗೆ ಅಚ್ಚುಮೆಚ್ಚಾದುವು

# ಮೈಸೂರು ರೇಷ್ಮೆ ವಸ್ತ್ರಗಳು

ಮಿತವ್ಯಯ - ಹಾಗೂ, ಸುರುಚಿ.

ಮೈಸೂರು ರೇಷ್ಮೆ — ಸಮಾಜದಲ್ಲಿ ಮೇಲ್ಮೆಯ ಕುರುಹು
ಮುತ್ಸಂಜೆಯಲ್ಲಿ ಅನುಪಮವಾದುದು



ಜಾರ್ಜೆಟ್, ಕ್ರೇಪ್,

ಜಾರ್ಜೆಟ್ ಮತ್ತು ಕ್ರೇಪ್ ಸೀರೆಗಳು

ಮನಸೆಳೆವ ಮಾದರಿಗಳು

ಇಂದಿನ ಅಂದದ ರಂಗುಗಳು.



ಸರ್ಕಾರಿ ರೇಷ್ಮೆ ನೇಯುವ ಕಾರ್ಖಾನೆ,
ಮೈಸೂರು




STOCKISTS :

**Messrs. Chandra Stores,**

Avenue Road : : Bangalore City

## ಅಮೋಘವಾದ ದೀಪಾವಳಿ ಆಕರ್ಷಣೆ

ಪ್ರಕಾಶ್ ಶಂಕರ್ ರವರ

# ★ ಮಾಯಪಿಲ್ಲ ★

(ತೆಲುಗು)



ಭೂಮಿಕೆಯಲ್ಲಿ :

**ರಘುರಾಮಯ್ಯ, ಕುಮಾರಿ, ಲಕ್ಷ್ಮೀರಾಜ್ಯಂ, ಶಿವರಾವ್, ಕನಕಂ ಮತ್ತಿತರರು**

**ತಾ|| 26-10-51 ರಿಂದ**

**ಬೆಂಗಳೂರು ಸಿಟಿ ಸ್ವಾಸ್ತಿಕ್ ಮತ್ತು ಭಾರತ್ ಟಾಕೀಸ್**

**ಸಿವಿಲ್ ಏರಿಯಾ ನ್ಯೂ ಅಪೇರಾ ಗಳಲ್ಲಿ**

**ಮೈಸೂರು 29-10-51 ರಿಂದ ಪ್ರಭುದೇವ್ ಟಾಕೀಸ್‌ನಲ್ಲಿ**



Distributors for Mysore State, South Canara & Coorg :

## NARAYANAN & Co. LTD.,

156, SUBEDAR CHATTRAM ROAD,

**BANGALORE CITY**



ಮಲೇರಿಯಾ ಅವನ
ಬದುಕನ್ನೇ
ಕೆಡಿಸಿಬಿಟ್ಟಿತು

## 'ಪಾಲುಡ್ರಿನ್' ಇದ್ದರೆ ಸಾಕು ನನಗೆ ಮಲೇರಿಯಾ ಭಯವೇ ಇಲ್ಲ



ಎಷ್ಟು ದಿನವಾದರೂ ಜ್ವರ ಬಿಡಲೇ ಇಲ್ಲ. ಅಬ್ಬಾ! ಏನು ಬಾಧೆ, ಏನು ಬಾಧೆ! ಆ ಬಡಪಾಯಿಗಿದ್ದ ಶಕ್ತಿಯೆಲ್ಲಾ ಉಡುಗಿಹೋಯಿತು. ಅವನ ಬಾಳೇ ಹಾಳಾಯಿತು. ಅದಕ್ಕವನೇನುಮಾಡುತ್ತಿದ್ದಾನೋ ಕಾಣೆ! ಅವನು ದಿನಕ್ಕೊಂದು ಮಾತ್ರೆಯಂತೆ 'ಪಾಲುಡ್ರಿನ್' ಪ್ರತಿ ದಿನವೂ ತೆಗೆದುಕೊಳ್ಳುತ್ತಾ ಬಂದರೆ, 3-4 ದಿನಗಳಲ್ಲೇ ಎಂದಿನಂತೆ ಆರೋಗ್ಯವಂತನಾಗಬಲ್ಲ. 'ಪಾಲುಡ್ರಿನ್' ಮಲೇರಿಯಾವನ್ನು ನಿವಾರಿಸಲೂ ಬಲ್ಲದು. ನಾನೇನೊ ಪ್ರತಿ ಭಾನುವಾರ ಊಟದ ನಂತರ, ಒಂದು 'ಪಾಲುಡ್ರಿನ್' ಮಾತ್ರೆಯನ್ನು ಬಿಡದೆ ತೆಗೆದುಕೊಳ್ಳುತ್ತಿರುವ ಕಾರಣ, ನನಗೆ ಮಲೇರಿಯಾ ಭಯವೇ ಇಲ್ಲ.




**ಪಾಲುಡ್ರಿನ್***
ಟ್ರೇಡ್ ಮಾರ್ಕ್

ಮಲೇರಿಯಾಕ್ಕೆ ಅದ್ಭುತವಾದ ಔಷಧದ
* ಅಣಗ ಒಂದು ಮಾತ್ರೆ

**ಇಂಪೀರಿಯಲ್ ಕೆಮಿಕಲ್ ಇಂಡಸ್ಟ್ರೀಸ್ (ಇಂಡಿಯಾ) ಲಿಮಿಟೆಡ್**

IK-P 140 KN

ಮನೆಗೆ ಕಾಂತಿ ! ಮನಕ್ಕೆ ಶಾಂತಿ !! ದೇಹಕ್ಕೆ ವಿಶ್ರಾಂತಿ !!!

ಕಣ್ಣುಗಳಿಗೆ ತಂಪು ಬೀರುವುದು,
ದೇದೀಪ್ಯಮಾನ

# ಮೈಸೂರು ಬಲ್ಬು




ಅದು ಭಾರತದ್ದು !
ಸುಲಭ ಬೆಲೆಯದು !
ಹೆಚ್ಚು ಬಾಳಿಕೆ ಬರುವುದು !!

ಫೋನ್: 2026 ಗ್ರಾಮ್ಸ್: 'Mysorlamp'

—— o ——

**ಮೈಸೂರು ಲ್ಯಾಂಪ್ ವರ್ಕ್ಸ್ ಲಿ.,**

ಮಲ್ಲೇಶ್ವರಂ . : : : ಬೆಂಗಳೂರು-3




ಸಂಪುಟ ೧೦ | ನವಂಬರ್ ೧೯೫೧ | ಸಂಚಿಕೆ ೮

## ಕುಹಕಿಡಿಗಳು



ಚರ್ಚಿಲ್ಲರು ತಮ್ಮ ತೈಲ ಚಿತ್ರವನ್ನು ರಚಿಸಲಿಚ್ಛಿಸಿದ ಕಲಾವಿದರಿಗೆ ಒಪ್ಪಿಗೆ ಇತ್ತಿದ್ದಾರಂತೆ—ಷರತ್ತಿನಮೇಲೆ.

—ಪರ್ಷಿಯಾ ತೈಲದಿಂದಲೇ ಬರೆಯಬೇಕು ಎಂಬುದೇ ಷರತ್ತಂತೇ!

* * *

ಮಕ್ಕಳ ರೋಗಗಳಲ್ಲಿ ಪ್ರವೀಣನಾದ ವೈದ್ಯನನ್ನು ಇನ್ನುಮೇಲೆ 'ಶಿಶುಪಾಲ' ಅಂತ ಕರೆಯಬೇಕು ಎಂದು ತಾಯಂದಿರೆಲ್ಲಾ ಯೋಚನೆ ಮಾಡಿದ್ದಾರಂತೆ—ವೈದ್ಯನ ನಡುವಳಿಕೆ ನೋಡಿ—

* * *

ಇವತ್ತು ದೋಭಿ ಅಂಗಡಿಯಲ್ಲಿ ನಾಲ್ಕು ಟೋಪಿಗಳು ಇಸ್ತ್ರಿ ಮಾಡಲ್ಪಡುವುದು.

—ಚುನಾವಣಾ ರಭಸಾ! ಸ್ವಾಮಿ!!

* * *

ಪರ್ಷಿಯಾದ ಡಾ|| ಮೊಸದಿಕ್ ಅವರು ಪ್ರಪಂಚ ಸಂಸ್ಥೆಯಲ್ಲಿ ಭಾಷಣ ಮಾಡಿದಾಗ—ಸಣ್ಣ ಸುತ್ತಿಗೆಯಿಂದ ಮೇಜನ್ನು ಕುಟ್ಟಿದರು ಓಹೋ! ಒಳ

ಗೆಲ್ಲೋ ಕುಡುಗೋಲು ಇರಲೇಬೇಕು ಅಂತ ಸಂಸ್ಥೆ ವಿವಾದವನ್ನು ಮುಂದಕ್ಕೆ ಹಾಕಿತು ಎಂದು ಹೇಳುವುದು ಸುಳ್ಳಂತೆ.

*　　*　　*

"ಮದ್ರಾಸಿನಲ್ಲಿ ಆಹಾರದ ಕೊರತೆ"
"ಮದ್ರಾಸಿನಲ್ಲಿ ನೀರಿನ ಸರಬರಾಜಿಗೆ ಕಷ್ಟ"
(ದಿನ ಬಿಟ್ಟು ದಿನದ ಪತ್ರಿಕೆಯ ಶಿರೋನಾಮೆ.)
—ಅಂದ ಮೇಲೆ ನಾಡಿದ್ದು.

*　　*　　*

"ನ್ಯೂಜಿಲೆಂಡಿನಲ್ಲಿ ಹೊನ್ನಿನ ಬಣ್ಣದ ಮಳೆ" (ಪತ್ರಿಕೆ)
—ದೀಪಾವಳಿ ಪ್ರಯುಕ್ತ ಅಮೋಘ ಮಳೆ ಏರ್ಪಡಿಸಿದ್ದಿರಬಹುದು.

*　　*　　*

ಫಿಲ್ಮ್‌ಹಿಟ್ಸ್ ಅವಮಾನಕರ ಎಂದರಂತೆ ಶ್ರೀ ಕೃಪಲಾನಿಯವರು.
—ಈಗ ಹುಡುಗರು ಭಾಷಣ ಅವಮಾನಕರ ಎಂದು ಅನ್ನಲಿಲ್ಲವಂತೆ.

*　　*　　*

ಬೆಂಗಳೂರಿನಲ್ಲಿ ಈಗ ಪ್ಲೇಗು ಕಾಲರಾ ಇಲ್ಲ. (ಆರೋಗ್ಯ ಇಲಾಖೆಯ ವರದಿ)
—ಬೆಂಗಳೂರಿನಲ್ಲಿ ಈಗ ಚುನಾವಣೆಯ ಬಿರುಸು. (ಪತ್ರಿಕೆ)
—∴ ಕಷ್ಟ ತಪ್ಪಲಿಲ್ಲಾ!!

*　　*　　*

"ಶ್ರೇಷ್ಠ ನ್ಯಾಯಾಸ್ಥಾನಗಳಲ್ಲಿ ವರ್ಷಕ್ಕೆ ೧೯೨ ದಿನ ರಜಾ ದಿನಗಳು" ಎಂಬ ಹೇಳಿಕೆ ಮದ್ರಾಸಿನ ಸಚಿವರು ಕೊಟ್ಟರಂತೆ.

—ಈಗ ನಮ್ಮ ಶಾಲೆಯ ಹುಡುಗರು 'ನಾವೇನು ಕಡಿಮೆ' ಅನ್ನುವ ಚಳುವಳಿಯನ್ನು ಹೂಡುತ್ತಾರೆಂಬುದು ಖಚಿತವಲ್ಲವಂತೆ.

*　　*　　*

"ಸೈಕಲ್ ಮೇಲೆ ರಾಗಿ ಸಾಗಿಸಿದ ಅಪಾದನೆ"

—ಛೀ! ಛೀ! ಮೋಟಾರು ಕಾರಿನಲ್ಲಿ ಸಾಗಿಸಿದ್ದರೆ ಯಾರೂ ಅಜಮಾಯಿಷಿ ಮಾಡುತ್ತಿದ್ದಿಲ್ಲ!!

*　　*　　*

ರೇಷ್ಮೇ ಹುಳಗಳ ಮನೆ ಹಾಳುಮಾಡಿ—ಅದರಲ್ಲಿ ಮಾಡಿದ ಸೀರೆಗಳನ್ನು ಉಪಯೋಗಿಸುತ್ತಾರೆ.

—ಸದ್ಯ! ಗಂಡನ ಮನೆ ಹಾಳುಮಾಡಿ ರೇಷ್ಮೆ ಸೀರೆಗಳನ್ನು ಉಡುತ್ತಾರೆ ಅಂತ ಅನ್ನಲಿಲ್ಲವಲ್ಲಾ!

*　　*　　*

ಮೈಸೂರಿನಲ್ಲಿ ದಸರಾ ಎಕ್ಸಿಬಿಷನ್‌ಗೆ ಹೋದವರು ಬಾಯಾರಿದಾಗ ಕೃಷ್ಣರಾಜಸಾಗರಕ್ಕೆ ಹೋದರಂತೆ.

*   *   *

ಮಹಾತ್ಮಾ ಗಾಂಧೀಯವರ ಚಲಚಿತ್ರ ತಯಾರಿಕೆಗೆ ಅಮೆರಿಕಾದಲ್ಲಿ ಒಂದು ಕಂಟಕ ಬಂದಿದೆಯಂತೆ.

—ಆತನ ಜೀವನ ಚಿತ್ರದಲ್ಲಿ, ಹೇಗೆ ಹೆಡ್ಲಿಲಮಾರ್‌ಳನ್ನು ತರುವುದು? ಎಂಬುದೇ ಕಂಟಕವಂತೆ.

*   *   *

ಡಾ|| ಗ್ರಹಾಂರವರ ವರದಿ ನಿರ್ವಿವಾದವಂತೆ!

—ಆಹಾ! ಅಡ್ಡಗೋಡೆ ಮೇಲೆ ಆರಿಹೋದ ದೀಪ ಇಟ್ಟಂತಿದೆ!!

*   *   *

ಶ್ರೀ ಚರ್ಚಿಲ್ಲರು ಜಯಗಳಿಸಿದರೆಂದು ಸುದ್ದಿ ಬಂದ ಕೂಡಲೇ ಈಜಿಪ್ಟಿನವರು ರಷ್ಯಾದೊಂದಿಗೆ ಷರತ್ತುಗಳಿಲ್ಲದೆ ಸಂಧಾನಕ್ಕೆ ಇಳಿಯುತ್ತಾರೆಂಬುದು ಖಚಿತವಲ್ಲವಂತೆ.

*   *   *

ಹಿಮಾಲಯವನ್ನು ಹತ್ತಿಳಿದು ಬಂದು, ಎರಡು ಹೆಬ್ಬಾವಿನೊಡನೆ ಒಂದೇ ಸಮಯದಲ್ಲಿ ಹೋರಾಡಿ ಜಯಿಸಿಬಂದು, ಶೀರ್ಷ ಊಟ ಮಾಡಿ ಮೈಬೆಳೆಸಿದ ಶ್ರೀ........ಧೀರರನ್ನು ಈಗ ಹೊಸ ಕೆಲಸಕ್ಕೆ ನೇಮಿಸಿದ್ದಾರಂತೆ.

—ಸಂಕೇತ ಭಾಷೆಯನ್ನು ಕನ್ನಡದಲ್ಲಿ ಬರೆಯುವುದು!

—ನಂಡಾ ರಾಂಡ್ಯ—

*   *   *

ಈಗೀಗ ಹೋಟಲ ಊಟದಲ್ಲಿ ಕಲ್ಲು ಸಿಗುವುದು ಹೆಚ್ಚಲ್ಲ—ಇದ್ದ ಹಲ್ಲು ಕಳೆದುಹೋಗುವುದೇ ವಿಷಾದಕರ. (ಓದುಗರ ಪತ್ರ)

*   *   *

ದಾವಣಗೆರೆಯಲ್ಲಿ ಎಂಜಿನಿಯರಿಂಗ್ ಕಾಲೇಜ್ ಸ್ಥಾಪನೆ. (ಶಿರೋನಾಮೆ)

—ಇನ್ನು ಚುನಾವಣಾ ಪ್ರಚಾರಕ್ಕಿಂತ ಬಿರುಸಾದ ಪ್ರಚಾರ ನಡೆಯುವ ನಿರೀಕ್ಷಣೆ ಇದೆ.

*   *   *

ಕೇರಳದಲ್ಲಿ ಆಹಾರದ ಅಭಾವ ಅತಿ ತೀಕ್ಷ್ಣವಾಗಿದೆಯಂತೆ.

—ಆದರೇನು! ನಾರೀಕೇರಳ ತಿಂದೇ ಜೀವಿಸಬಹುದಲ್ಲವೇ ಅಂತ ಒಬ್ಬಾತ ಹೇಳಿದನಂತೆ.

*   *   *

ಇಷ್ಟು ಗರುಡಿಗಳಿವೆ ಪೇಟೆಯಲ್ಲಿ—ಗರುಡಿಗಳ ಪರವಾಗಿ ಯಾರಾದರೂ ಚುನಾವಣೆಗೆ ನಿಲ್ಲಬಾರದೇ? ಅಂತ ಒಬ್ಬರು ಬರೆದಿದ್ದಾರೆ.

—ಯಾಕೆ! ನಮ್ಮ ಅಖಾಡಾದಿಂದ ಮೂರು ಜನ ಉಸ್ತಾದಿಗಳಂತಿರುವ ವರೇ ನಿಂತಿರುವಿರಲ್ಲಾ!

* * *

"ಅರೆಹೊಟ್ಟೆಯಾದರೂ ಕೊಟ್ಟೇವೂ. ಹಸಿವಿನಿಂದ ಸಾಯಲು ಬಿಡುವುದಿಲ್ಲ." (ಮೈಸೂರಿನ ಹೋಂ ಮಂತ್ರಿಗಳು)

ಕರ್ಣಾಟಕ ಹೀಗೆ ಅನ್ನುವುದು. ಏಕೀಕರಣಕ್ಕೆ ಇದು ಸಹಕಾರಿಯೇ??

—o—



ನೌಕರ:—ಮನುಷ್ಯರ ಹೊಟ್ಟೆಗೇ ಸಾಲದು ಅಂಥಾ ಈ ಕಾಲದಲ್ಲಿ, ಈ ಕೆಲಸವಿಲ್ಲದ ಬಸವನ್ನ ಕಟ್ಟಿಕೊಂಡು ಹೇಗಯ್ಯಾ! ನಿಭಾಯಿಸ್ತಿ!!

ಕೋಲೆ ಬಸವನವ:— ಅದರ ವತ್ಯಾಗೆ ಯಾಕೆ ಕೋಪ ಸಾಮಿ? ಅದು ನಿಮ್ಮಂಗೆ ಮನೇಲಿ ಕಛೇರಿಲೂ ಎಲ್ಲಾತಕ್ಕೂ ಹ್ಞೂ ಅಂತ ತಲೆ ಆಡಿಸುತ್ತೆ! ಹೇಗೋ ದೇವರು ನಿಮಗೆ ಮೇಯ್ಸೋ ಅಂತೆ ಅದಕ್ಕೂ ಹುಲ್ಲು ಮೇಯಿಸ್ತಾನೆ.

# ಕೊರವಾವಲೋಕನ

—0—

ಕಿವಿಯಿಂದ ಕಿವಿತನಕ ನಗು ಹರಡಿತ್ತು ಕೊರವನ ಮುಖದ ಮೇಲೆ. ಎಲಾ! ಇಷ್ಟು ಖುಷಿಯಾಗಬೇಕಾದರೆ, ಇವರ ಮಾವ ಈ ನಲವತ್ತರ ಪ್ರಾಯದ ಅಳಿಯನನ್ನು ದೀಪಾವಳಿ ಹಬ್ಬಕ್ಕೇನಾದರೂ ಕರೆದಿದ್ದಾನೆಯೋ ಎನ್ನಿಸಿತು ನನಗೆ. ನಾಲ್ಕು ಮಕ್ಕಳ ತಂದೆ ಇವ, ದೀಪಾವಳಿಗೆ ಮಾವನೇ ತನ್ನ ಸಂಸಾರ ಸಮೇತ ಇವನ ಮನೆಗೆ ಬರೋದೇ ಈ ಕಾಲಕ್ಕೆ ಚಂದ ಕಾಣಿಸುತ್ತೆ ಅಂತ ಕೂಡಲೇ ಮನಸ್ಸಿಗೆ ಹೊಳೆಯಿತು. ಕಡೆಗೆ ತಡೆಯಲಾರದೆ ಕೆಣಕಿ ಕೇಳಿಯೇ ಬಿಟ್ಟೆ. "ಕೊರವಾ! ಇಂತಹ ಸುಖ ಚಿಹ್ನೆಗೆ ಕಾರಣ?" ಅಂತ.

ಜಗಜ್ಜನನಿ ಕಾಳಿ, ರಾಕ್ಷಸನನ್ನು ನೋಡಿದ ಹಾಗೆ ನನ್ನನ್ನು ನೋಡಿ ಹೇಳಿದ "ಮಂಕೇ! ಇದೂ ಗೊತ್ತಿಲ್ಲವೇ? ಈಜಿಪ್ಟಿನಲ್ಲಿ ಬ್ರಿಟಿಷಿನವರ ಸಾಮಾನುಗಳಿಗೆ ಬಹಿಷ್ಕಾರವಂತೆ. ಇರಾನಿನಲ್ಲಿಯೂ ತಥಾಸ್ಥಿತಿ. ಬರ್ಮಾ ಬ್ರಿಟನ್ನಿಗೆ ಅಸ್ಪೃಶ್ಯ. ಮಿಕ್ಕ ಏಷ್ಯಾದೇಶಗಳಲ್ಲಿ ಹಾಲೆಂಡು ಫ್ರಾನ್ಸಿನವರ ಕೈವಾಡ. ಅಂದ ಮೇಲೆ ಬ್ರಿಟನ್ನಿನ ಸಾಮಾನುಗಳೆಲ್ಲಾ ಭಾರತ ಪಾಕೀಸ್ಥಾನ ಇವೆರಡೂ ದೇಶಗಳಲ್ಲೇ ಮಾರಾಟವಾಗಬೇಕು. ತತ್ಕಾರಣ, ಬೆಲೆ ಇಳಿದೇ ಇಳಿಯಬೇಕು. ಇನ್ನು ಮೇಲೆ ಮೋಟಾರಿನ ಖರ್ಚು ಕಡಿಮೆ. ಅಂದ ಹಾಗೇ ಕ್ಲಬ್ಬಿನ ವಹಿವಾಟೂ ಚೆಂದವಾಗಬಹುದು ಅದಕ್ಕೇ ನಗುಮುಖ" ಅಂತ.

*  *  *

ತುಂತುರು ಹನಿ ಬೀಳುತ್ತಿತ್ತು. ಕುಳಿರ್ಗಾಳಿ ಸೊಯ್ಯನೆ ನನ್ನ ಕೆನ್ನೆಗೆ ಮುತ್ತುಕೊಟ್ಟುಕೊಂಡೇ ಹೋಗುತ್ತಿತ್ತು. ಸಂಧ್ಯಾಕಾಲ. ಕ್ಲಬ್ಬಿನ ವರಾಂಡಾದಲ್ಲಿ, ಮೆಚ್ಚಿನ ಮಾಸಪತ್ರಿಕೆಯ ಬಿಚ್ಚು ಚಿತ್ರಗಳನ್ನು ನೋಡುತ್ತಾ ಇದ್ದೆ.

"ಏನ್ರಾಜಾ! ಬಲು ಸ್ವಾರಸ್ಯವಾಗಿದೆಯೋ ಪತ್ರಿಕೆ" ಅಂದ ಕೊರವ. ಅವನು ಯಾವ ಮಾಯದಲ್ಲಿ ಬಂದು ಕೂತನೋ ಎದುರಿಗೆ, ನನಗೆ ತಿಳಿಯದು. ಭಾರತದ ಸಂಸ್ಥಾನಗಳೆಲ್ಲಾ ಕೇಂದ್ರೀಕರಣವಾದ ಮೇಲೆ ನನ್ನನ್ನು ಆತ ಮಾತನಾಡಿಸುವಾಗ ರಾಜ, ದೊರೆ. ನನ್ನರಸ, ಹೀಗೇ ಸಂಭೋದಿಸಲು ಶುರು ಹಚ್ಚಿದ್ದಾನೆ. ಹೀಗೆ ಶುರು ಮಾಡಿದ ಮೇಲೆ ಮುಂದೆ ಅರ್ಥ ತಾಸಿನ ಹೊತ್ತು

ಬಂದ "ಬಿಲ್"ಗೆಲ್ಲಾ ನನ್ನ ಸಹಿಯೇ ಬೀಳುವಂತೆಯೂ ಮಾಡುತ್ತಾನೆ. ಇದನ್ನರಿತ ನಾನು ಕೂಡಲೇ "ಬಾಯ್" ಒಂದು ಪ್ಲೇಟ್ ಉಪ್ಪೇರಿ ತೊಗೊಂಡು ಬಾ ಅಂದೆ. ಸುಲಭದಲ್ಲೇ ಸೂತಕ ಕಳೆಯಲಿ ಅಂತ.

ಒಂದು ಪ್ಲೇಟ್ ಉಪ್ಪೇರಿ, ಬಿಸಿಬಿಸಿ ಉಪ್ಪೇರಿ, ಎರಡುಗ್ಲಾಸ್ ನೀರು ಮೇಜಿನ ಮೇಲೆ ತಂದಿಡಲ್ಪಟ್ಟಿತು. ಅದು ಮಾಮೂಲು.

ಎರಡು ಚೂರು ಬಾಯಿಗೆ ಹಾಕಿದ ಕೊರವ. ಕೂಡಲೇ ಒಂದು ಗುಟುಕು ನೀರು ಬಾಯಿಗೆ ಹಾಕಿಕೊಂಡು, ಚೆನ್ನಾಗಿ ಬಾಯಿ ಮುಕ್ಕಳಿಸಿ ಉಗುಳಿ ಬಂದು ಕೂತ.

"ಅಲ್ಲಾ! ದೊರೆ, ಇದೇನು ಉಪ್ಪೇರಿ ತರಿಸಿದೆ! ಬೆಣ್ಣೆ ಕಾಯಿಸಿದ ತುಪ್ಪದಲ್ಲಿ ತಿಂಡಿ ಮಾಡೋ ಕಾಲ ಇತ್ತು. ಈಗ ಎಣ್ಣೆ ಬೇಯಿಸಿದ ವನಸ್ಪತಿಯಲ್ಲಿ ತಿಂಡಿ ಮಾಡೋಕಾಲ. ಆ ಬೇಯಿಸಿದ ಎಣ್ಣೆ ತುಪ್ಪದಲ್ಲಿ ಕರಿದು, ಉಪ್ಪು ಏರಿಸಿ, ಉಪ್ಪೇರಿ ಅಂತ ತಂದಿಟ್ಟರೆ, ಅದನ್ನು ನಾನು ತಿಂದರೆ, ನನ್ನ ಹೊಟ್ಟೇಲಿರೋ ಹುಳು ಕೂಡ ಅದನ್ನು ತಿಂದು ಸತ್ತುಹೋಗುಲ್ಲವೇ? ಸತ್ತಹುಳು ಹೊಟ್ಟೇಲಿ ಸುಮ್ಮನಿರುತ್ತೆಯೇ? ನನ್ನನ್ನೂ ಅದರ ಜತೆಗೆ ಸಹಗಮನ ಮಾಡಿಸುಲ್ವೇ! ಇನ್ನು ಮೇಲೆ ವನಸ್ಪತಿ ತಿಂಡೀಗೆ ಬಹಿಷ್ಕಾರ ಹಾಕೋಣ" ಅಂತಂದ.

ಭಾರ್ಗವ ಅವರಿಗೆ ಈ ವಿಚಾರ ತಿಳಿಸೋಣ ಅಂತ ಸುಮ್ಮನಾದೆ.

* * *

ರಮಾರಮಿ ಕೆಂಪು ಟೈ ಹಾಕಿಕೊಂಡು ಬಂದಿದ್ದ ಕೊರವ. ಆ ಬಣ್ಣ ನೋಡಿದರೇನೇ, ಬಡ ಎತ್ತು ಕೂಡ ಹೋರೀಹಾಗೆ ಅವನ ಮೇಲೆ ಕೆರಳಿ ಬೀಳಬೇಕು ಹಾಗಿತ್ತು ಅದರ ಕೆಂಪು ರಂಗು.

ನನ್ನ ಕೆಂಪು ನಾಮ ಕೂಡ 'ಕ್ವೆಶ್ಚನ್‌ಮಾರ್ಕ್' ಆದ ಹಾಗೆ ಆಯಿತು.

ಚೂಟಿ ಕೊರವ. ನನ್ನ ಮುಖ ಚಿಹ್ನೆ ಕಂಡು, ಉತ್ತರಿಸಿದ.

'ಚುನಾವಣೆ ಕಾಲ. ನಮ್ಮ ಕೇರಿಯಿಂದ ನಾನೂ ನಿಂತಿದ್ದೇನೆ ಸ್ವತಂತ್ರನಾಗಿ. ಆ ಕೇರೀಲಿ, ಕುಂಬಳಕಾಯಿ ಸಾಹುಕಾರ, ಹಳೇಕಾಗದದ ಧರ್ಮಸಾಗರ, ಇಬ್ಬರೂ ನಿಂತಿದ್ದಾರೆ. ನನ್ನ 'ಟೈ' ನೋಡೇ ಕೇರಿ ಹುಡುಗರೆಲ್ಲಾ ನನ್ನ ವಿಚಾರವೇ ಮಾತನಾಡುತ್ತಾ ಇದ್ದಾರೆ. ಅಂದರೆ ಸಾಕಷ್ಟು ಪ್ರಚಾರ ನಡೆದಂತೇ ಆಗಿದೆ. ಇನ್ನೇನು ಎರಡು ಮೂರು ವಾರದಲ್ಲಿ ಅವರಿಬ್ಬರೂ ಬೇರೆ ಬೇರೆಯಾಗಿ ಬಂದು, 'ಕೊರವಯ್ಯನೋರೆ, ನಿಮಗ್ಯಾಕೆ ಚುನಾವಣೆ ಗಲಾಟೆ. ಆರಾಮವಾಗಿ ತಿಂದು, ಇದ್ದುದನ್ನು ಜೀರ್ಣಿಸಿಕೊಂಡು,

ಕಂಡೋರನ್ನ ಕಂಡು ಕೇಕೆ ಹಾಕೋ ನಿಮಗ್ಯಾಕೆ ಈ ಪಾಪತ್ರಯ. ನಿಮ್ಮ ಉಮೇದುವಾರಿಕೆ ಹಿಂತೆಗೆದುಕೊಳ್ಳಿ ಅಂತ ಅಂದೇ ಅನ್ತಾರೆ, ಆಗ ನಾನು ಈಗಾಗಲೇ ಸಾವಿರ ಖರ್ಚಾಗಿದೆ. ಅಂತ ಹೇಳಿ ಮುಗುಮ್ಮಾಗುತ್ತೇನೆ. ಅವರುಗಳಿಗೆ ಈ ಸಾವಿರ ಏನು ಮಹಾ ಲೆಕ್ಕ! ಅಂದರೆ ಎರಡು ಸಾವಿರ ಖಂಡಿತ. ಆದಾದ ಕೂಡಲೇ ಈ 'ಟ್ರೈ'ನ ಎಲ್ಲರೆದುರಿಗೂ ಚಿಂಕಿಗೆ ಹಾಕ್ತೇನೆ. ನಂತರ ಸಚೇಲ ಸ್ನಾನ ಮಾಡಿ ಗಂಧ ಹಚ್ಚಿಕೊಂಡು ಬೇರೆ ಉಡುಪು ಧರಿಸುತ್ತೇನೆ' ಎಂದ.

ಇವನ ಆಶೆ ನೋಡಿದಿರಾ! ಎನ್ನೋ ಹಾಗಾಯ್ತು ನನಗೆ.

*　　　*　　　*

ಅವತ್ತು ನಾನು ಕ್ಲಬ್ಬಿಗೆ ಹೋದಾಗ ಸ್ವಲ್ಪ ಖಿನ್ನನಾಗಿದ್ದೆ. ಯಾರೂ ಇಲ್ಲದ, ರೀಡಿಂಗ್ ರೂಂನಲ್ಲಿ ಕುಳಿತು, ಬೇಡದ ಪತ್ರಿಕೆಯ ಪುಟಗಳನ್ನು ತಿರುವುತ್ತಿದ್ದೆ. ಗಲ್ಲ ಎದೆ ಮೇಲಕ್ಕೆ ಅದರ ಪಾಡಿಗೆ ಆದೇ ಬಿದ್ದಿತ್ತು.

ಹಠಾತ್ತನೆ ಭೂಕಂಪ ಆದ ಹಾಗಾಯ್ತು. ಏನು ಗಲಾಟೆ ಅಂತ ತಲೆ ಎತ್ತಿದರೆ ಕೊರವ ನಾಲ್ಕು ಧಡೂತಿ ಸ್ನೇಹಿತರೊಡನೆ ನಾನಿದ್ದಲ್ಲಿಗೇ ಲಗ್ಗೆ ಹಾಕಿದ್ದ. ನನ್ನನ್ನು ನೋಡಿದಕೂಡಲೇ, ಮೂಗಿನ ಮೇಲಿನ ಕನ್ನಡಕ ಕೆಳಗೆ ಬೀಳೋ ಹಾಗೆ ಒಮ್ಮೆ ಬೆನ್ನನ್ನು ಗುದ್ದಿದ. ನನ್ನ ಸೊಪ್ಪು ಮುಖ ನೋಡಿ, ಯಾಕೆ? ತಮ್ಮಾ! ಏನು ಬೇನೆ ನಿನ್ನ ಮನಸ್ಸಿಗೆ ಅಂದ.

ಹೀಗೆ ಹೀಗೆ ಅಂತ ಮಗನನ್ನು ಇಂಜಿನಿಯರಿಂಗ್ ಕಾಲೇಜಿಗೆ ಸೇರಿಸಲು ಪಟ್ಟ ಕಷ್ಟವನ್ನೆಲ್ಲಾ ಹೇಳಿ ಕಡೇಗೆ ಫಲವಿಲ್ಲದೆ ಹೋದುದನ್ನು ಹೇಳಿದೆ. ಇತ್ತು ಹುಟ್ಟಿದವಗೆ ಇಂಜಿನಿಯರಿಂಗ್ ಇಲಾಖೆ ಅಂತಾರೆ ಅಂತ ಆಶೆಪಟ್ಟೆ. ಆದರೆ ಅರಿಯದ ಹುಡುಗನ್ನ ಹೊಸಲು ದಾಟಿಸಲು ಆಗಲೇ ಇಲ್ಲ ಅಂತ ಗೋಳಿಟ್ಟೆ.

ನನ್ನ ಬೆನ್ನು ಮಾಲೀಸ್ ಮಾಡುತ್ತಾ ಬಹಿರಂಗವಾಗಿ ಹೇಳಿದ:

ಇತ್ತು ಹುಟ್ಟಿದವಗೆ ಇಂಜನಿಯರಿಂಗ್ ಇಲಾಖೆ.
ಕುಟ್ಟಿ ಕಾದಾಡಿದವಗೆ ನ್ಯಾಯಾಂಗ ಇಲಾಖೆ.
ಬರಿಯ ಉಂಬುವನಿಗೆ ಆಹಾರ ಇಲಾಖಾ.
ಅರಿಯದೆ ಅರಚುವಗೆ ಅರಸತ್ವ ಇಲಾಖೆ.

ನಿನ್ನ ಮಗ ಸೊಂಪಾಗಿ ಬಾಳ್ತಾನೆ—ಹೆದರಬೇಡ ಅಂತ ಸೇರಿಸಿದ.



# ಕುಚೋದ್ಯಾವಳಿ

ಲೇಖಕಿಯರಿಗೂ ಲೇಖಕರಿಗೂ ವ್ಯತ್ಯಾಸವೇನು ? (ರಮಾಬಾಯಿ, ಉಡುಪಿ)

—ನಿಮ್ಮ ಪ್ರಶ್ನೆಗೆ ಸಾಕಷ್ಟು ಅಶ್ಲೀಲವಾದ ಉತ್ತರವನ್ನು ಈ ಬಾರಿ ಬರೆಯಲು ಸ್ಫೂರ್ತಿ ಇಲ್ಲವಾದ್ದರಿಂದ, ಮತ್ತೊಂದು ಸಲ ಬರೆದು ಕೇಳಿರಿ.

ಹೊಟ್ಟೆಕಿಚ್ಚಿನಿಂದ ನೀವು ಹಾಸ್ಯಮಾಡುವುದುಂಟೆ? (ಮುಳುಗಿ, ಬಾಗೇಪುರ)

—ನಿಮ್ಮ ಪ್ರಶ್ನೆಯಲ್ಲಡಗಿರುವ ಹಾಸ್ಯಕ್ಕೂ ಅದೇ ಕಾರಣವಿರಬಹುದಲ್ಲವೆ?

ನಿಮ್ಮ ಓಟು ಯಾರಿಗೆ ? (ಪುಟ್ಟಸೀನು, ಚಿಂತಾಮಣಿ)

—ಕಬ್ಬಿಣದ ಪೆಟ್ಟಿಗೆಗೆ.

ನೀವು ಟೀಕೆ ಮಾಡುತ್ತ ಬಂದಿರುವುದರಿಂದ ಆಡಳಿತ ಪದ್ಧತಿಯಲ್ಲಿ ಎಳ್ಳಷ್ಟಾದರೂ ಗುಣ ಕಂಡುಬಂದಿದೆಯೆ ? (ಮೋಹನದಾಸ, ಹೊಸಕೋಟೆ)

—ಸಂಕ್ರಾಂತಿಯ ಹೊತ್ತಿಗೆ ನೀವೇ ನೋಡಬಹುದು ......ಎಳ್ಳೆಷ್ಟು ಎಂಬುದನ್ನು.

ನಿಮ್ಮಲ್ಲಿ ಬರೆಯುತ್ತಿರುವ ಲೇಖಕರ ಪಟ್ಟಿಯೊಂದನ್ನು ವಿಳಾಸ ಸಹಿತ ನನಗೆ ರವಾನಿಸುವಿರಾ ? (ಹಥೀಸಿಂಗ್, ಅಲಸೂರು)

—ಪಾಪ, ಪಾಪ ! ಅವರನ್ನು ಏಕೆ ಗೋಳು ಹುಯ್ದುಕೊಳ್ಳುತ್ತೀರಿ !

ಪ್ರೇಮವೆಂದರೇನು ? ಪ್ರೇಮಕ್ಕೂ ಕಾಮಕ್ಕೂ ಇರುವ ಭೇದಗಳನ್ನು ಉದಾಹರಣೆ ಸಹಿತ ವಿವರಿಸಿ. (ಶಿವಕ್ಕ. ಮಂಗಳೂರು)

—ನಿಮ್ಮ ಪತ್ರ ನಮ್ಮ ಕಚೇರಿಗೆ ಹೇಗೆ ಬಂತೋ ತಿಳಿಯದು ; ಇನ್ನು ಮುಂದಾದರೂ, ಅಡ್ರೆಸ್ಸನ್ನು ಸರಿಯಾಗಿ ಬರೆದು ಅಂಚೆಗೆ ಹಾಕಿ.

ಕುಕ್ಕೂಗೆ ಮದುವೆಯಾಗಿದೆಯೆ? ಅವಳಿಗೆ ನಾನು ಪತ್ರ ಬರೆಯಬಹುದೆ? (ಅಣ್ಣಯ್ಯಪ್ಪ, ಮಡಿಕೇರಿ)

— ಇಂಥ ಪತ್ರಗಳಿಗಾಗಿಯೇ ಮೀಸಲಾಗಿರುವ ಮಾಸಿಕೆಯೊಂದಕ್ಕೆ ನಿಮ್ಮ ಪ್ರಶ್ನೆಯನ್ನು ಕಳುಹಿಸಲಾಗಿದೆ. ಅವರಿಂದ ಉತ್ತರ ಬರುವ ತನಕ ಪಠ್ಯಪುಸ್ತಕಗಳನ್ನೋದುತ್ತ ಹುಷಾರಾಗಿ ಶಾಲೆಗೆ ಹೋಗುತ್ತಿರಿ.

---

# ಮನೆಸಸ್ತರ ನೆಂಟಸ್ತಿಕೆ

"ನೋಡಿ ರೂಪು ಮುಖ್ಯವಲ್ಲ ಮನೆತನ ಮುಖ್ಯ. ಋಣಾನುಬಂಧ, ಮಾಡಿದ ಕರ್ಮ, ಬ್ರಹ್ಮ ಸಂಕಲ್ಪ, ಗಂಡ ಹೆಂಡ್ತಿ ಅಚ್ಚುಮೆಚ್ಚಾಗಿ ಕಚ್ಚಾಡ್ದೆ ಸಂಸಾರ ಮಾಡಿಕೊಂಡಿರ್ಲೀಂತ ತಾನೆ ನಾವೆಲ್ಲಾ ಮಾಡೊ ಪ್ರಯತ್ನ? ಮಾನವಿಲ್ಲದ ಲುಚ್ಛಗಳ ಸಹವಾಸ ಮಾಡೋಕಿಂತ ಹುಟ್ಟಿದ ಹೆಣ್ಣುಗಳನ್ನ ಕತ್ತು ಹಿಸುಕಿ ಹಿತ್ತಲ ಭಾವಿ ಪಾಲು ಮಾಡುವುದು ಲೇಸಲ್ಲವೆ? ನೀವೇ ಹೇಳಿ.. ನಮ್ಮ ಎರಡನೆ ಹುಡುಗಿನ್ನೋಡಿ ಜನ ಬಂದು ಬಂದು ನಂಹುಡುಗಂಕೊಡಿ ನಮ್ಮ ಕೈಲಿ ತಾಳಿ ಕಟ್ಸಿ ಅಂತ ನಾಮುಂದು ತಾಮುಂದು ಬಂದು ಕಾಡಿಸಿದರು. ಹಾಗೆಲ್ಲಾ ನಾನು ದುಡುಕಿ ನೆಂಟಸ್ತಿಕೆ ಮಾಡುವವನಲ್ಲ. ಒಬ್ಬ ಹೆಣ್ಣು ಮಗಳ ಇಡೀ ಜೀವಮಾನದ ಜವಾಬ್ದಾರಿ ನಮ್ಮ ಕೈಲಿದೆ ಸ್ವಾಮಿ. ಪರಮ ಹುಶಾರಿಯಿಂದ ಇರಬೇಕು...."

"ಅಂದ್ರೆ ನಿಮ್ಮ ಎರಡನೆ ಹುಡುಗೀನ ಎಲ್ಲಿಗೆ ಕೊಟ್ಟಿರೋದು?"

"ಸರಿಯಾದ ಸಂಬಂಧ ಸಿಕ್ಕೋವರೆಗೂ ನಾನು ಮದುವೆ ಗೋಜಿಗೇ ಹೋಗೊಲ್ಲಾಂತ ಹೇಳಲಿಲ್ಲವೆ?...."

"ಹಾಗಾದ್ರೆ ನಮ್ಮ ಎರಡನೆ ಹುಡುಗನ ವಿಷಯಕ್ಕೆ ಪ್ರಸ್ತಾಪಿಸಿದ್ದು ಮೂರನೇ ಹುಡುಗಿನಲ್ಲವೆ?"

"ಹೌದು ಹೌದು ಎರಡನೆಯವಳಿಗೆ ಯೋಗ್ಯವಾದ ಕಡೆ ಸಿಕ್ಕದಿದ್ದುದ ಪ್ರಯುಕ್ತ ಅವಳನ್ನು ಓದಿಸುತ್ತಿದ್ದೇನೆ. ಸಿಕ್ಕಿದರೆ ಸರಿ ಇಲ್ದೇ ಇದ್ರೆ ಮೇಡಂನ್ನೊ ಇಲ್ಲಾ ಡಾಕ್ಟ್ರು ಮಾಡಿಬಿಡೋದೂಂತ."

"ಮೊದಲನೆಯವನೊ—ಯವಳೋ?"

"ಹ್ಹಹ್ಹಹ್ಹ ಯವಳೇ. ನನಗೆ ಮೂರು ಹೆಣ್ಣು ಒಂದೇ ಗಂಡು. ಕಡೆಯವಳೇ ನಿಮ್ಮ ಸೊಸೆಯಾಗಬೇಕೂಂತ ಇರೋದು."

"ಸರಿ ಸರಿ ಅಂದ್ರೆ ಮೊದಲನೆ ಹುಡಿಗೀನ್ನ ಎಲ್ಲಿಗೆ ಕೊಟ್ಟಿದ್ದೀರಿ?"

"ಅಯ್ಯೋ ಅದೊಂದು ಕತೆಯೆ. ಅವಳ ಯೋಗ್ಯತೆಗೂ ಸರಿಯಾದ ಗಂಡು ಸಿಕ್ಕಲಿಲ್ಲ. ಅಳಿಯಾಂತ ಹೇಳ್ಕೊಬೇಕಾದರೆ ಒಂದು ಐವತ್ತು, ಬೇಡ ಒಂದು ಇಪ್ಪತ್ತು ಎಕರೆ ಜಮೀನು, ಒಂದು ವಾಸಕ್ಕೆ ಬಂಗಲೆ ಬೇಡವೇ? ಇಷ್ಟೂ ಇಲ್ದೆ ಹೋದರೆ ನಮ್ಮ ಮಕ್ಕಳು ಏನು ಸುಖ ಪಟ್ಟಾವು? ನೀವೇ ಹೇಳಿ. ಈಗ ನಮ್ಮ ನಿಮ್ಮ ಅಂತಸ್ತು ಒಂದೇ ಅಂತ ತಾನೆ ನಾವು ನಿಮ್ಮ ಸಂಬಂಧಕ್ಕೆ

ಹಾತೊರೆಯುತ್ತಿರೋದು? ಹುಡುಕಿದೆ ಹುಡುಕಿದೆ ನನ್ನ ಆ ಹಿರಿಯ ಹುಡುಗಿಗೆ ವರನ್ನ ಅವಳ ಗ್ರಹಚಾರ ನಮ್ಮ ಅಂತಸ್ತಿಗೆ, ಮನೆತನಕ್ಕೆ, ತಕ್ಕ ವರ ಸಿಕ್ಕದೆ ಹೋಯ್ತು ನೋಡಿ...."

"ಹಾಗಾದರೆ ಆಕೆಗೂ ಇನ್ನೂ ಲಗ್ನವಿಲ್ವೆ?"

"ಎಲ್ಲಿ ಬಂತು ರಾವ್‌ಜಿ ಅದೇ ಹೇಳಿದೆನಲ್ಲಾ....ನಮ್ಮ ಅಂತಸ್ತು ನಮ್ಮ ಮನೆತನ—ನಮ್ಮ ಯೋಗ್ಯತೆ ನಮ್ಮ ಶಿಖರ...."

"ಹಿರೇ ಮಗಳು ಮನ್ಲೆ ಇದ್ದಾಳೇನು ಹಾಗಾದ್ರೆ"

"ಎಲ್ಲಿ ಬಂತು ರಾವ್‌ಜಿ....ಮನುಷ್ಯನ ಮನಸ್ಸು ಬಹು ಚಂಚಲ ನೋಡಿ ಅವಳ ಜಾತಕದಲ್ಲಿ ಮೋಟಾರ್ ಡ್ರೈವರ್‌ನ ಕಟ್ಕೊಂಡು ಹೋಗೋದೂಂತ ಇದೆ ಎಂದು ನಮ್ಮ ಶಾಸ್ತ್ರಿಗಳು ಹೇಳಿದ್ದರು. ಹಾಗೇ ಆಯ್ತು.

"ರಾಮ ರಾಮ—ಸರಿ ತಾವು ಏನು ಕೆಲಸ ಮಾಡಿಕೊಂಡಿದ್ದೀರಿ? ರಿಟೈರೊ? ಯಾವ ಇಲಾಖೆಲಿದ್ದದು?"

"ಗೋಪಾಳದ ಗೋವಿಂದಯ್ಯನೋರ ಕಾಲ. ವೆಂಕಟೇಶ್ವರ ಬ್ಯಾಂಕ್ ತಾವು ಕೇಳಿರಬಹುದು. ಅದರ ಮೊದಲ ಸೆಕ್ರೆಟರಿ ನಾನೆ ಸನ್‌ಸಾವಿರ ದೊಂಭೈನೂರ........"

"ಓ ಹೊ ಹೊ ...ಆರು ತಿಂಗಳು ಶಿಕ್ಷೆ ಆಯ್ತು ಬ್ಯಾಂಕಿನ ಸೆಕ್ರೆಟೆಗೇಂತ ಪೇಪರ್ನಲ್ಲಿ ಬಂದಿತ್ತಲ್ಲ ನೀವೇನೆ ಆ ಸೆಕ್ರೆಟರಿ?"

"ಗ್ರಹಚಾರ ರಾವ್‌ಜಿ, ಹೌದು ಅದೇ ವರ್ಷ ಹಿರೇ ಮಗಳು ಬೊಂಬಾಯಿಗೆ ಹೊರಟುಹೋದದ್ದು ಮೋಟಾರ್ ಸಮೇತ...."

"ಸರಿ ನಿಮ್ಮ ಕಡೆಯ ಹುಡುಗೀನ್ನ ನಮ್ಮ ಮನೆಗೆ ಕೊಡಬೇಕೂಂತೀರೋ.... ಈ ಹುಡುಗಿನೆ ಕಡೇ ಹುಡುಗಿ ಅಂದ್ರೆ ನಿಮ್ಮ ಮಗನಿಗೆ ಏನು ವಯಸ್ಸು? ಏನು ಮಾಡ್ಕೊಂಡಿದ್ದಾನೆ."

"ಮಗ ಅಂದ್ರೆ ಅವನು ನನ್ನ ಸೆಕೆಂಡ್ ವೈಫ್ ಸನ್ನು...."

"ಹಾಗಾದ್ರೆ ಈ ಹುಡುಗಿ?"

"ಕಡೆ ಹುಡುಗೀನೆ? ಫಸ್ಟ್ ವೈಫ್ ಡಾಟರ್ರು"

"ಫಸ್ಟ್ ಅಂಡ್ ಸೆಕೆಂಡ್ ವೈಫ್ಸ್ ಇಬ್ರೂ ಇಧಾರೆಯೆ?"

"ಅವರಿಗೇನು ಧಾಡಿ ಇಬ್ರೂ ಇದ್ದಾರೆ"

"ಸೆಕೆಂಡ್ ವೈಫ್ ಯಾರ ಪೈಕಿ....ಯಾರು ಸಂಬಂಧ?"

"ನಮ್ಮ ಪೈಕೀನೆ... ನನಗೆ ಬ್ಯಾಂಕ್ ಕೆಲಸ ಇದ್ದ ಕಾಲ ನೋಡಿ, ಮನೇಲಿ ಅಡಿಗೇಗೇಂತ ನಮ್ಮೂರ ಕಡೆಯವ ಒಬ್ಬನಿದ್ದ. ಅತ ಕುಟುಂಬಾಂತ

ಹೇಳಿ ಯಾರನ್ನೋ ತಂದು ಮನೇ ಸೇರ್ಸಿದ್ದ....ಕೆಳ್ಳಗೆ ಬೆಳ್ಳಗೆ ಲಕ್ಷಣವಾಗಿದ್ದಳು ಹುಡುಗಿ ...ಪಾಪ ಒಂದಿಷ್ಟು ಕಾಲ ಇಬ್ರೂ ಸಂಸಾರ ಮಾಡ್ಕೊಂಡಿದ್ರು. ಒಂದು ದಿನ ಆ ಅಡಿಗೆ ಭಟ್ಟ ರಾತ್ರಿ ಉಂಡು ಮಲಗಿದೋನು ಏಳಲೇ ಇಲ್ಲ. ಹಾರ್ಟ್ ಕೈಕೊಟ್ಟು ಬಿಡ್ತು. ಈ ಪ್ರಾಣಿ ಪ್ರಲಾಪ ನೋಡೋಕಾಗಲಿಲ್ಲ. ಆಕೇನ್ನ ಸಂತೈಸಿ ಅವನ ಕುಟುಂಬ ಅಮ್ಮ ನೀನು ಚಿಂತೆ ಪಡಬೇಡ ನಿನ್ನ ನನ್ನ ಕುಟುಂಬಾಂತ್ಲೆ ಭಾವಿಸ್ತೇನೆ ಅಂತ ಆಕೇನ್ನ ಎರಡನೆ ಕುಟುಂಬ ಮಾಡ್ಕೊಂಡೆ. ಈ ಸನ್ನ ಹುಟ್ಟಿದ ..."

"ರಾಮ ರಾಮ....ಎರಡನೆ ಹುಡುಗಿ?"

"ಅದೇ ಸರಿಯಾದ ಮನೆತನಸ್ತರು ಸಿಕ್ಲಿಲ್ಲಾಂತ ಹೇಳಲಿಲ್ಲವೆ?...."

"ಆಕೆಯಾದ್ರು ಯೋಗ್ಯವಾಗಿದ್ದಾಳೆಯೆ?"

"ಇಲ್ದೆ ಏನೊಂದ್ರೆ....ಅವಳ ಜೆತೆಗೆ ಓದುತ್ತಾ ಇದಾನಂತೆ ಅವನ್ಯಾರೊ ಅಂತೋಣಿ ಶ್ರೀನಿವಾಸನ್ ಅಂತೆ ಅವನ್ನ ಕಟ್ಕೊತೀನಿಂತಿದ್ಳು ಅದೇನು ಮಾಡ್ತಾಳೊ...."

"....ನಾನೇನು ಮಾತಾಡ್ಲಿ ಈಗ ಒಂದೂ ತೋಚದಿಲ್ಲ...."

"ಮುಂದಿನ ಭಾನುವಾರು ಕಡೆ ಕುವರೀನ್ನ ಕರ್ಕೊಂಡು ಬರ್ತೀನೆ ಹುಡುಗೀನ್ನೋಡಿ ...ನಿಮ್ಮ ಮನೆತನ ಅಂತಸ್ತು ಯೋಗ್ಯತೆ ನೋಡೀ ನಾನು ನಿಮ್ಮ ಸಂಬಂಧ ಬೆಳೆಸಬೇಕೂಂತ ಬಂದಿದ್ದೇನೆ . ಕನ್ಯಾ ಸ್ವೀಕರಿಸಬೇಕು ..."

"....ಸಂಕಟ ...ಆಗಲಿ ಬನ್ನಿ ಯಾಕೋ ನನಗೆ ಹೊಟ್ಟೆಲಿ ಕಸವಿಸಿ ಆಗ್ತಾ ಇದೆ ...ನಿಮ್ಮ ಅಂತಸ್ತಿಗೆ ನಾವು ಸರಿಯೆ? ಅಂತ ಯೋಚನೆ ಮಾಡಿ....ಅಬ್ಬ ಉಬ್ಬಳಿಕೆ ಬರ್ತಾ ಇದೆ .. ಹೇಳ್ತೀನೆ...."

"ಹೇಳೋದೇನು ರಾವ್‌ಜಿ ...ನಿಮ್ಮ ಹುಡುಗ ಆಗಲಿ ನಮ್ಮ ಹುಡುಗಿ ಜೊತೆಗೆ ಒಪ್ಕೊಂಡಿದಾನಂತೆ ನನ್ನ ಮಗಳೇ ಹೇಳಿದಳು. ಇಬ್ರೂ ಒಂದೇ ಸ್ಕೂಲ್ ತಾನೆ ...ನಿಮಗೂ ಒಂದು ಮಾತು ಹೇಳೋಣಾಂತ ಬಂದೆ ಅಷ್ಟೆ ... ಮೆತ್ತಗೆ! ಯಾಕೆ ಮಾಲಾಡ್ತಿರಲ್ಲ. ಅರರೆ....ಬಿದ್ದೀರಿ ಬಿದ್ದೀರಿ ...ಯಾರಾದರೂ ಕೊಂಚ ನೀರು ತನ್ನಿ....ಛೆಛೆ ...ಛೆ ...ಇದ್ದಕ್ಕಿದ್ದ ಹಾಗೆ ಬಿದ್ದು ಬಿಟ್ರುಲ್ಲಾ.... ರಾವ್‌ಜಿ ...ರಾವ್‌ಜಿ ...ರಾವ್‌ಜಿ...."

ಪರಮನಿಷ್ಠರಾದ ರಾವ್‌ಜಿಯವರ ಪ್ರಾಣವಾಯು ಈ ಮಾನ್ಯನಸ್ತರ ನೆಂಟಸ್ತಿಕೆ ವಿಷಯ ಕೇಳಿ ಹಾಗೆ ಹಾಯಾಗಿ ಪರಂಧಾಮಕ್ಕೈದಿತ್ತು. ಪರಮಾತ್ಮನು ಅವರ ಆತ್ಮಕ್ಕೆ ಶಾಂತಿಯನ್ನೀಯಲಿ. ಶ್ರೀರಾಮರಕ್ಷೆ. ಕೃಷ್ಣಾರ್ಪಣ.

—ದಾಶರಥಿ ದೀಕ್ಷಿತ್.

# ನೀತಿಯ ಕತೆಗಳು

(ಬಲಿತವರಿಗೆ)

ಒಂದು ಹಳ್ಳಿ ಅಂಚಿನ ಕಾಡಿನಲ್ಲಿ ಒಂದು ಅಂಜುಬುರುಕ ಮೊಲ ಇತ್ತಂತೆ. ಅದೊಂದು ದಿನ ಓಡಾಡ್ತಾ ಇದ್ದಾಗ ಹತ್ತಿರದಲ್ಲೇ ಒಂದು ನದಿ ಹರಿಯುತ್ತಾ ಇದ್ದುದನ್ನು ನೋಡಿತಂತೆ. ಆಚೆಕಡೆ ದಡದ ಮೇಲೆ ಗರುಕೆ ಹುಲ್ಲು ಸೊಂಪಾಗಿ ಬೆಳೆದಿದ್ದನ್ನೂ ನೋಡ್ತಂತೆ. ಹೇಗಾದರೂ ಮಾಡಿ ಆ ದಡಕ್ಕೆ ಹೋದರೆ ಹೊಟ್ಟೆ ತುಂಬಾ ತಿನ್ನಬಹುದು ಅಂತ ನಾಲಿಗೇನೆ ಚಪ್ಪರಿಸಿತಂತೆ. ಆದರೆ ಮೊಲಕ್ಕೆ ಈಜು ಬರುತ್ತೆಯೇ? ಏನಪ್ಪಾ! ಮಾಡೋದು ಅಂತ ಕಿವೀನ ಕೆಳಗಿಳಿಸಿ ಚಿಂತಾಕ್ರಾಂತವಾಯ್ತಂತೆ.

ಆ ನದೀಲೇ ಒಂದು ಮೊಸಳೆ ಇತ್ತಂತೆ. ಛಳಿಯಾಗ್ತಾಇದೆ ಬಿಸಿಲು ಕಾಯಿಸಿ ಕೊಳ್ಳೋಣ ಅಂತ ಅದು ದಡಕ್ಕೆ ಬಂತಂತೆ. ಅಲ್ಲೇ ಮರಳಮೇಲೆ ಹೊರಳಿಕೊಂಡಿತಂತೆ. ಆಗ ಮೊಲವನ್ನು ನೋಡ್ತಂತೆ. ಯಾಕೆ ಮೊಲ? ಬಲು ಯೋಚನೆ ಮಾಡ್ತಾ ಇದ್ದೀ? ಏನು ಸಮಾಚಾರ ಅಂತಂತೆ.

ಆಗ ಮೊಲಕ್ಕೆ ಒಂದು ಯೋಚನೆ ಹೊಳೀತಂತೆ. "ಏನೂ ಇಲ್ಲ ಮೊಸಳೆ ರಾಯ!! ಈ ಕಾಡಿನಲ್ಲಿ ನಮ್ಮವರು ಹತ್ತು ಸಾವಿರ ಇದೀವಿ ನದಿಯಲ್ಲಿ ನೀವು ಎಷ್ಟಿದೀರಿ, ನಮಗಿಂತ ಕಡಿಮೆಯೋ? ಹೆಚ್ಚೋ? ಅಂತ ಯೋಚಿಸ್ತಿದ್ದೆ. ಅಂತ.

ಮೊಸಳೆ ಹೇಳ್ತಂತೆ. "ನಾವು ಹೆಚ್ಚು ನನಗೆ ಗೊತ್ತು. ನಮ್ಮನೆಯಲ್ಲೇ ೧೬ ಜನ ಇದೀವಿ" ಅಂತ.

ನಾನು ನಂಬುಲ್ಲ ಅಂತಂತೆ ಮೊಲ.

"ಹಾಗಾದರೆ ನೀನೆ ಎಣಿಸಿಕೊ, ನನ್ನ ಬೆನ್ನ ಮೇಲೆ ಕೂತುಕೋ ಈ ದಂಡೆಯಿಂದ ಆ ದಂಡೆ ತನಕ ನಿನ್ನ ಕರೆದುಕೊಂಡು ಹೋಗ್ತೇನೆ." ಎಂದು ಹೇಳಿತಂತೆ ಮೊಸಳೆ.

'ಹ್ದೂ' ಅಂತ ಮೊಲ ಮೊಸಳೆ ಮೇಲೆ ನದಿ ದಾಟಿತಂತೆ. ಆಕಡೆಯಲ್ಲಿ ನೋಪಾಗಿ ತಿಂದು ಸೊಂಪಾಗಿ ಬೆಳೆಯುತ್ತಿತ್ತಂತೆ.

ನೀತಿ :—ಚುನಾವಣೆ ನದಿ ದಾಟಬೇಕಾದರೆ, ನಂಬರುಗಳ ನೆಪ ಹೂಡಲೇ ಬೇಕು.

—o—

# 'ದೆಹಲಿ ಕಾಗದ'

---

ಹಿಂದಿನ ಕಾಲದಲ್ಲಿ ಗಾಣದ ಎತ್ತು ಅಂತ ಹೇಳ್ತಾ ಇದ್ದರು. ನೀವೂ ಕೇಳಿರಬಹುದು ಗಾಣದ ಮಿಷಿನ್‌ಗಳು ಬಂದ ಮೇಲೆ ಗಾಣದ ಎತ್ತು ಪಟ್ಟಣ ವಾಸಿಗಳಿಗೆ ಅಪರೂಪ ಆದ್ದರಿಂದ ಸ್ವಲ್ಪ ವಿಶದೀಕರಿಸಬೇಕಾಗಿದೆ. ನೆತ್ತಿ ತಣ್ಣಗಾಗೋ ಎಣ್ಣೇನ ಎತ್ತೇನೋ ಗಾಣ ಆಡಿ ತೆಗೀತಿತ್ತು. ಆದರೆ ಒಂದು ತೊಟ್ಟು ಎಣ್ಣೇನೂ ಅದರ ನೆತ್ತೀಗೆ ಇಲ್ಲವೇ ಇಲ್ಲ. ಹಗಲೆಲ್ಲಾ ಸುತ್ತಿ ಸುತ್ತಿ ಸುಸ್ತಾಗಿ ಹುಲ್ಲುಕಡ್ಡಿ ಬಾಯಿಗೆ ಸಿಕ್ಕಿಸಿಕೊಂಡು. ಸಾಯಂಕಾಲ ಆ ಎತ್ತು ಬಿದ್ದುಕೋತಾ ಇತ್ತು.

ಇದನ್ನು ಯಾಕಪ್ಪಾ ಹೇಳಿದೆ ಅಂದರೆ, ಕಂಟ್ರೋಲರ ಆಫೀಸ್ ಶಾಮ ಸೇನರಾಯನ್ನ ನೋಡಿದಾಗಲೆಲ್ಲಾ ಗಾಣದ ಎತ್ತಿನ ಜ್ಞಾಪಕ ಬರುತ್ತೆ ನನಗೆ. ಬಲು ಒಳ್ಳೆ ಮನುಷ್ಯ. ಚೆನ್ನಾಗಿ ಓದಿ ಮುಂದಾಗಿ ಪ್ಯಾಸು ಮಾಡಿದವ. ಆದರೆ ಅವನ ಅದೃಷ್ಟ ಗಾಣದ ಆಫೀಸಿಗೆ ಸೇರಿದ ಹಗಲೆಲ್ಲಾ ಹತ್ತಾರು ಲಕ್ಷ ರೂಪಾಯಿ ಲೆಕ್ಕ ನೋಡಿದರೂ, ಇವನ ನೆತ್ತಿ ತಣ್ಣಗಾಗುವುದಕ್ಕೆ ಅವನಿಗೆ ಅರವತ್ತೇ ತಿಂಗಳಿಗೆ ಸಿಕ್ಕುತ್ತಿದ್ದಿತು. ಸಾಯಂಕಾಲ ಕಬ್ಬನ ಬನದಲ್ಲಿ ಹುಲ್ಲಿನ ಮೇಲೆ ಹತ್ತು ನಿಮಿಷ ಸುಧಾರಿಸಿಕೊಂಡು ಒಂದು ಗರುಕೆ ಹುಲ್ಲಿನ ತುಂಡನ್ನು ಹಲ್ಲಿಗೆ ಸಿಕ್ಕಿಸಿಕೊಂಡು, ಅದನ್ನೇ ಮೆಲಕು ಹಾಕ್ತಾ ಮನೆಗೆ ಬರುತ್ತಿದ್ದ.

ಒಂದು ದಿನ ಅವನ ಕಿರಿಮಗಳು ಲಲಿತ ಇವನು ಮನೆಗೆ ಬರೋ ಹೊತ್ತಿಗೆ ಅಳ್ತಾ ಕಂಬದ ಪಕ್ಕದಲ್ಲಿ ನಿಂತಿದ್ದಳು. ಕಾರಣ ಇಷ್ಟೇ. ಅವಳ ಜತೆ ಹುಡುಗಿ ಶ್ಯಾಮಲ, ಪೋಲೀಸ್ ರಾಮರಾಯನ ಮಗಳು. ಪಂಡಿತ ನೆಹ್ರೂ ಅವರ "ಸಹಿ" ಹೊಂದಿದ್ದಳಂತೆ. "ನೀನೂ ಹೋಗಿ ಕೇಳೇ ನಿಂಗೂ ಕೊಡ್ತಾರೆ" ಅಂತ ಇವಳಿಗೆ ಹೇಳಿದಳಂತೆ. ಆ ವೇಳೆಗೆ ಪಂಡಿತ ನೆಹ್ರೂ ಅವರು ದೆಹಲಿಗೆ ಹೊರಟೇ ಹೋಗಿದ್ದರು. ಲಲಿತನ ಮನಸ್ಸಿನಲ್ಲಿ ನಮ್ಮಪ್ಪ ಇಷ್ಟು ದೊಡ್ಡೋರು ಅವರು ಹೇಳಿದ ಹಾಗೆ ನಮ್ಮನೇಲಿ ಎಲ್ಲರೂ ಕೇಳ್ತಾರೆ. ಅಷ್ಟು ದೊಡ್ಡ ಕಚೇರೀಲಿ ಕೆಲಸ ಮಾಡ್ತಾರೆ, ಅಂತಹ ದೊಡ್ಡವರು, ಪಂ|| ನೆಹ್ರೂ ಅವರನ್ನು ಒಂದು "ಸಹಿ" ಕೊಡಿ ನಮ್ಮ ಲಲಿತನಿಗೆ ಬೇಕು ಎಂದರೆ ಅವರು ಆಗುಲ್ಲ ಅಂತಾರೆಯೇ? ಅಂತ.

ಶ್ಯಾಮಸೇನ ರಾಯರಿಗೆ ಲಲಿತನ್ನ ಸಮಾಧಾನ ಮಾಡೋದು ಸ್ವಲ್ಪ ಕಷ್ಟವೇ ಆಯಿತು. ಕಡೆಗೆ ಪಂ|| ನೆಹ್ರೂ ಅವರಿಗೆ ಒಂದು ಕಾಗದ ಬರೆದು—ಹೀಗೇ! ನನ್ನ ಮಗಳು ಲಲಿತನಿಗೆ ನಿಮ್ಮ ಸಹಿ ಬೇಕು ಅಂತ ಅವರನ್ನು ಕೇಳಿಕೊಂಡು, ದೊಡ್ಡಾಫೀಸಿನಲ್ಲಿ ಕೆಲಸ ಮಾಡೋ ಶ್ಯಾಮಸೇನರಾಯ ಅಂತ ರುಜು ಮಾಡಿ, ಆ ಕಾಗದವನ್ನು ಆ ಆರು ವರ್ಷದ ಲಲಿತೆ ಕೈಲೇ ಕೊಟ್ಟು ನೀನು ಇದನ್ನ ನಾಳೆ ಬೆಳಗ್ಗೆ ಪೋಸ್ಟಿಗೆ ಹಾಕಮ್ಮ ಅಂತ ಹೇಳಿದ ಮೇಲೆ ಅವಳು ಊಟ ಮಾಡಿ ಮಲಗಿದ್ದು—ಗೆದ್ದೆ ಅಂತ ಶ್ಯಾಮಸೇನರಾಯನು ಮಲಗಲು ಅಣಿ ಮಾಡಿಕೊಂಡ.

* * *

ಶನಿವಾರ ಬೆಳಗ್ಗೆ ಕಛೇರಿಗೆ ಹೋದಾಗ ಸ್ವಲ್ಪ ಹೊತ್ತಾಗಿತ್ತು. ಸೂಪರಿಂಟೆಂಡೆಂಟರು ಶ್ಯಾಮಸೇನರಾಯನನ್ನ ಹೀನಾಮಾನ ಅಂದರು. ಏಕೆಂದರೆ ಅವರ ಅಧಿಕಾರಿ ಅ|| ಕಂಟ್ರೋಲರು ಅವರನ್ನ ದಬಾಯಿಸಿದ್ದರು. ಈ ದಬಾವಣೆ ಆ ದಿನ ಮಂತ್ರಿಗಳ ಕೊಠಡಿಯಲ್ಲಿ ಶುರುವಾಗಿ, ಕೊಕ್ಕು ಆಟ ಆಡಿದ ಹಾಗೆ, ಹೊತ್ತಾಗಿ ಬಂದ ಶ್ಯಾಮಸೇನರಾಯನ ಮೇಲೆ ಪೂರ್ಣ ತಿರುಗಿತ್ತು. ಅವನಿಗೂ ತಾಳ್ಮೆ ಮೀರಿತ್ತು, ಹೋಗೀಸಾರ್! ಒಂದು ಐದು ನಿಮಿಷ ಹೊತ್ತಾದರೆ, ಫೈನ್ ಹಾಕಿಸಾರ್ ಹೀಗೆಲ್ಲಾ ಏನು ಬಯ್ತೀರಿ? ಚುನಾವಣಾ ಪ್ರಣಾಳಿಕೇನ ಸ್ವತಂತ್ರ ಹಣವಂತ ಉಮೇದುವಾರರಿಗೆ ಬರೆದು ಕೊಟ್ಟರೇನೇ, ನೀವು ಕೊಡೋ ಸಂಬಳಕ್ಕಿಂತ ಹೆಚ್ಚು ದುಡ್ಡು ಕೊಡ್ತಾರೆ ಅಂತ ಇಲ್ಲದ ಮೀಶೆ ತಿರುವಿಕೊಂಡೇ ಅಂದೇಬಿಟ್ಟ. ಅಂದ ಮೇಲೆ ತನ್ನ ಕುರ್ಚಿಯ ಹತ್ತಿರ ಹೋಗಿ ಕೂತುಬಿಟ್ಟ. ಸೂಪರಿಂಟೆಂಡೆಂಟರ ಮೇಲೆ ನೌಕರ ಎದುರು ಬಿದ್ದದ್ದು ಆ ಕಛೇರಿಯ ಚರಿತ್ರೆಯಲ್ಲೇ ಹೊಸದು. ಹಿಂದಿನ ಭಾರತದಲ್ಲಿ ಹೀಗಾಗಿದ್ದಿದ್ದರೆ, ಒಬ್ಬ ಪಾಳೇಗಾರ ಆ ಸ್ಥಳದಲ್ಲೇ ರಾಜ್ಯಧಾನಿ ಸ್ಥಾಪಿಸಿ ಒಂದು ರಾಜ್ಯಾನೇ ಕಟ್ಟುತ್ತಿದ್ದ. ಆ ಸೋಜಿಗದ ಅಮಲಿನಲ್ಲಿ ಸೂಪರಿಂಟೆಂಡೆಂಟರು ಅವಾಕ್ಕಾದರು.

* * *

ಮಂತ್ರಿಗಳ ಮೇಜಿನ ಮೇಲೆ ದೊಡ್ಡದೊಂದು, ದೆಹಲಿಯಿಂದ ಬಂದ ಅಷ್ಟಮೂಲೆಗಳಲ್ಲಿ ಅರಗೊತ್ತಿದ ಲಕ್ಕೋಟೆ ಇತ್ತು. ಪಂ|| ನೆಹ್ರೂ ಅವರ ಆಪ್ತ ಕಾರ್ಯದರ್ಶಿಯಿಂದ ಅಂತ ಗುರುತಿತ್ತು. ಮಂತ್ರಿಗಳು ಅವಸರವಾಗಿ ಅದನ್ನು ತೆಗೆದುಕೊಂಡರು. ದೊಡ್ಡಾಫೀಸಿನಲ್ಲಿರುವ ಶ್ರೀ ಶ್ಯಾಮಸೇನರಾಯರ ಮಗಳು ಲಲಿತನಿಗೆ ಅಂತ ಅದರ ಮೇಲೆ ವಿಳಾಸ ಬರೆದಿತ್ತು. ಅಂಚೆಯವ ತೂಕದ ಕಾಗದ, ದೆಹಲಿಯ ಕಾಗದ, ನೆಹ್ರೂ ಅವರ ಆಪ್ತಕಾರ್ಯದರ್ಶಿ,

ಇತ್ಯಾದಿ ನೋಡಿ, ಈ ಶ್ಯಾಮಸೇನರಾಯ ಮಂತ್ರಿಗಳ ಕಡೆಯವನೇ ಇರಬೇಕು ಅಂತ ಅಲ್ಲಿಗೇ ತಲಪಿಸಿದ್ದ. ತಿರುಗಿ ಕೋಕ್ಯಾಟ ಶುರುವಾಯ್ತು. ಮಂತ್ರಿಗಳು ಪ್ರಧಾನ ಕಾರ್ಯದರ್ಶಿಗೆ ಹೇಳಿಕಳಿಸಿದರು. ಅವರು ತಲೆ ಆಡಿಸಿ, ತಮ್ಮ ಉಪಕಾರ್ಯದರ್ಶಿಯನ್ನು ಕರೆಸಿಕೊಂಡರು. ಅವರೂ ತಿಳಿಯಲಿಲ್ಲ ಅಂತ ತಲೆಯಾಡಿಸಿ, ತಮ್ಮ ಸಹ ಕಾರ್ಯದರ್ಶಿಯನ್ನು ಬರಮಾಡಿಕೊಂಡರು. ಅವರು ಅಸಿಸ್ಟೆಂಟ್ ಕಾರ್ಯದರ್ಶಿಯನ್ನು ಕರೆಸಿದರು. ಆತ ಸೂಪರಿಂಟೆಂಡೆಂಟರನ್ನು ಕರೆಸಿದರು. ಸೂಪರಿಂಟೆಂಡೆಂಟರು ಈ ಕಾಗದದ ವಿಳಾಸ, ಸುತ್ತಲೂ ನಿಂತಿದ್ದ ಅಧಿಕಾರಿ ವೃಕ್ಷ ತುಟ್ಟತುದಿಯಲ್ಲಿ ಕೂತ ಮಂತ್ರಿವರ್ಯರನ್ನು ನೋಡಿ, ಒಮ್ಮೆ ಗೋಮಾಳೆಯನ್ನು ನುಂಗಿಕೊಂಡು, ಕನ್ನಡಕದಾಚೆ ಕಣ್ಣುಗುಡ್ಡೆ ಹೊರಬೀಳು ವಂತೆ ನೋಡಿ, "ಸಾರ್ ಇದು ನಮ್ಮ ಶಾಖೆಯ ಗುಮಾಸ್ತ ಶ್ಯಾಮಸೇನ ರಾಯನಿಗೆ ಬಂದಿರಬೇಕು ಎಂದರು. ಕೂಡಲೆ ಎಲ್ಲರ ಕೊರಳುಗಳಿಂದಲೂ ಒಂದೇ ಧ್ವನಿ ಹೊರಟಿತು. ಪಂ|| ನೆಹ್ರೂ ಶ್ಯಾಮಸೇನರಾಯನಿಗೆ ಸ್ವತಃ ಪತ್ರ ಬರೆಯಬೇಕಾದರೆ, ಶ್ಯಾಮಸೇನರಾಯನ ಮರ್ಮ ಏನು?"

ಶ್ಯಾಮಸೇನರಾಯನಿಗೆ "ಬುಲಾವ್" ಹೋಯಿತು. ಆಗತಾನೇ ಅವನ ಭಾಗಕ್ಕೆ ಪ್ರತ್ಯಕ್ಷ ದೇವತೆಯಾದ ಸೂಪರಿಂಟೆಂಡೆಂಟರ ಹತ್ತಿರವೇ ಎದುರು ಮಾತಾಡಿದ್ದ. ಅದಾದ ಅರ್ಧ ಗಂಟೆಯಲ್ಲೇ ಮಂತ್ರಿಗಳ ಕೊಠಡಿಗೆ ಬುಲಾವ್. "ಆಯಿತು! ನನ್ನಾಟ ನನಗೆ ಇವತ್ತು ಡಿಸ್ಮಿಸ್ ಖಂಡಿತ. ಇನ್ನೂ ಏನೇನು ಅನಾಹುತ ಆಗುತ್ತಯೋ, ನನ್ನ ಹೆಂಡತಿ ಮಾಂಗಲ್ಯ ಗಟ್ಟಿಯಾಗಿದೆಯೋ?" ಅಂತ ಶಂಕಿಸುತ್ತಲೇ ಶ್ಯಾಮಸೇನರಾಯ ಮಂತ್ರಿಗಳ ಕೊಠಡಿಗೆ ಹೋದ. ಅಲ್ಲಿನ ವಾತಾವರಣ ನೋಡಿದ. ನಾಲಿಗೆ ಅಲ್ಲಾಡಲಿಲ್ಲ. ಎಲ್ಲರಿಗೂ ವರಸೆ ಯಾಗಿ ಕೈಮುಗಿದು ನಿಂತ. ಮಂತ್ರಿಗಳೇ ಅಂದರು "ಸ್ವಾಮಿ! ಈ ಕಾಗದ ನಿಮ್ಮದೇನೇ?" ಶ್ಯಾಮಸೇನರಾಯ ಅದನ್ನು ನೋಡಿದ. ಅವನ ಮಗಳು ಲಲಿತೆಗೆ ಅಂತಿತ್ತು. ಚೂಟಿಯಾಗಿದ್ದವ ಶ್ಯಾಮಸೇನರಾಯ ಕಾಲೇಜಿನಲ್ಲಿ, ಅದರ ಮರ್ಮವನ್ನು ಗ್ರಹಿಸಿದ. ಮುಗುಮ್ಮಾಗಿ ಹೌದು ಸಾರ್" ಅಂತ ಅಂದು, ಅದನ್ನು ಒಡೆಯದೆ ಓದದೆ ಜೇಬಿನಲ್ಲಿಟ್ಟುಕೊಂಡ. "ಯಾತಕ್ಕೆ ಸಾರ್ ಹೇಳಿಕಳಿಸಿದ್ದು" ಅಂತ ಕೇಳಿಯೂ ಕೇಳಿದ. "ಮಂತ್ರಿಗಳೇ ಅಂದರು "ಈ ಕಾಗದ ಕೊಡೋದಕ್ಕೆ ಅಂತ. "ಥ್ಯಾಂಕ್ಯು ಸಾರ್" ಅಂತ ಒಬ್ಬೊಬ್ಬ ರಿಗೂ ಹೇಳಿ ಹಿಂತಿರುಗಿ ಬಂದ.

ಅರ್ಧ ಗಂಟೆ ಮೇಲೆ ತಿರುಗಿ "ಬುಲಾವ್" ಬಂತು ಮಂತ್ರಿಗಳ ಕೊಠಡಿ ಯಿಂದ. ಈ ಸಾರಿ ಕೊಠಡಿಯಲ್ಲಿ ಯಾರೂ ಇದ್ದಿಲ್ಲ—ಮಂತ್ರಿಗಳ ಹೊರತು. ಕುರ್ಚಿಕೊಟ್ಟು ಕೂರಿಸಿ "ರಾಯರೇ, ಪಂ|| ನೆಹ್ರೂ ಅವರು ನಿಮಗೆ ಪತ್ರ

ಬರೆದಿದ್ದನ್ನ ನೋಡಿದೆ. ನೀವು ಕೆಲಸಕ್ಕೆ ರಾಜೀನಾಮೆ ಕೊಡುವ ರೀತಿಯಲ್ಲಿ, ಚುನಾವಣಾ ಪ್ರಣಾಳಿಕೆ ಬರೆಯುತ್ತೇನೆ ಅನ್ನುವ ರೀತಿಯಲ್ಲಿ, ಸೂಪರಿಂಟೆಂಡೆಂಟರ ಹತ್ತಿರ ಹೇಳಿದರಂತೆ. ಪಂ|| ನೆಹ್ರೂ ಅವರು ನಿಮ್ಮ ಆತ್ಮೀಯ ಸ್ನೇಹಿತರು. ಅವರು ನಿಮ್ಮ ಹತ್ತಿರ ಸ್ವಯಂ ಪತ್ರವ್ಯವಹಾರ ಇಟ್ಟುಕೊಂಡಿದ್ದಾರೆ ಅಂದಮೇಲೆ, ನಿಮಗೆ ಚುನಾವಣೇಲಿ ಜಯವೇನೋ ಖಂಡಿತ. ಆದರೆ ಅದರಿಂದ ನಿಮಗೆ ಸಿಗುವುದೇನು? ತಿಂಗಳಿಗೆ ನೂರು ರೂಪಾಯಿ ಸಂಬಳ. ಐದು ವರ್ಷಕಾಲ. ನಿಮಗೆ ಈಗ ಅರವತ್ತು ಸಂಬಳ ಬರ್‍ತಾ ಇದೆ. ನೂರರವತ್ತು ಮಾಡಿ ಆಹಾರ ಶಾಖೆಯ ಸೂಪರಿಂಟೆಂಡೆಂಟರಾಗಿ ವರ್ಗ ಮಾಡ್ತೇನೆ. ನೀವು ಚುನಾವಣೆಗೆ ನಿಲ್ಲಬೇಡಿ. ಆಗಬಹುದೇ? ಅಂದರು. ಶ್ಯಾಮಸೇನರಾಯನ ಕಣ್ಣಲ್ಲಿ ನೀರು ಊರಿತು. "ಎಲ ಎಲಾ! ಲಲಿತೆ ಹುಟ್ಟಿದಾಗ ಜ್ಯೋತಿಷ್ಯ ಹೇಳಿದ್ದ. ಇವಳು ತಂದೆಗೆ ಬಲು ಹಿತಕಾರಿ ಅಂತ. ಆ ಹಿತ ಇಷ್ಟು ಉನ್ನತ ರೀತಿಯಲ್ಲಿ ಆಗುತ್ತೆ ಅಂತ ಆತ ಕನಸಿನಲ್ಲಿಯೂ ಕಂಡಿರಲಿಲ್ಲ!"

ದೈನ್ಯದಿಂದ ಹೇಳಿದ "ಖಾವಂದರು ನನಗೆ ತಂದೆ ತಾಯಿಯಂತೆ. ನೀವು ಹೇಳಿದ ಹಾಗೆ ಕೇಳುತ್ತೇನೆ" ಅಂತ.

ಭಡ್ತಿ, ವಾ, ವರ್ಗದ, ಹುಕುಂ ಕೈಲಿ ತೆಗೆದುಕೊಂಡು ಶ್ಯಾಮಸೇನರಾಯ ಹಿಂತಿರುಗಿದಾಗ ಸೂಪರಿಂಟೆಂಡೆಂಟರ ಮೇಜಿನ ಹತ್ತಿರ ಬಂದಾಗ, ಸೂಪರಿಂಟೆಂಡೆಂಟರು ಎದ್ದುನಿಂತರು.

* * *

ಮನೆಗೆ ಬಂದು, ಸಾಲ ಮಾಡಿ ತಂದಿದ್ದ ಮಲ್ಲಿಗೆ ಮೊಗ್ಗು ಮೈಸೂರು ಪಾಕನ್ನು ಲಲಿತೆಗೆ ಕೊಟ್ಟ. ದೆಹಲಿಯಿಂದ ಬಂದ ಲಕ್ಕೋಟೆ ಒಡೆದು, ಅದರೊಳಿದ್ದ ನೆಹ್ರೂಜೀಯವರ ಸಹಿಯನ್ನು ಲಲಿತೆಗೆ ಕೊಟ್ಟ. ಮನಸ್ಸಿನಲ್ಲಿಯೇ ಅಂದುಕೊಂಡ. ಪಂ|| ನೆಹ್ರೂಗೆ, ಅವರಿಗಿರೋ ತಾಪ ಸಹಸ್ರದಲ್ಲಿ, ಈ ಹುಚ್ಚು ಹುಡುಗಿ ಕಾಗದಕ್ಕೆ ಜವಾಬು ಕೊಡೋ ವಿರಾಮ ಎಲ್ಲಿ ಸಿಗ್ತು ಅಂತ ಆಶ್ಚರ್ಯಪಡುತ್ತಾ—ಪರಟು ಬಿಚ್ಚಿದ ಊಟಕ್ಕೆ.

—ಕುಮಾರ್.

[ಇದು ಕಾಲ್ಪನಿಕ! ಖಂಡಿತವಾಗಿಯೂ ನಡೆದುದಲ್ಲ ಅಂತ ಲೇಖಕರು ಭರವಸೆ ಕೊಟ್ಟಿರುವುರಾದ್ದರಿಂದ,—ಬೇರೆ ಲೇಖನಗಳು ಇಲ್ಲದ್ದರಿಂದ, ಇದನ್ನು ಪ್ರಕಟಿಸಿದ್ದೇವೆ. ವಾಚಕರ ಕ್ಷಮೆ ಬೇಡಲೇಬೇಕು ಅಲ್ಲವೆ? ಸಂ.]

---

# ನಮ್ಮೂರು ಎಕ್ಸಿಬಿಷನ್

---

ನವರಾತ್ರಿ ಅಂದರೆ ನಮ್ಮೂರಲ್ಲಿ ಎಕ್ಸಿಬಿಷನೇ ದೊಡ್ಡ ಅವಾಂತರ. ಬೆಂಗಳೂರೆಕ್ಸಿಬಿಷನ್ನಿಗೆ ಬೆಂಕಿ ತಗುಲಿದ ಮೇಲಂತೂ, ನಮ್ಮೂರು ಎಕ್ಸಿಬಿಷನ್ ನೋಡುವುದಕ್ಕೆ ಬರುವ ಜನರಲ್ಲಿ ಕುತೂಹಲ ಜಾಸ್ತಿ. ಭಾರಿ ಬೆಂಕೀನ ನಮ್ಮೂರು ಜನ ಎಂದೂ ನೋಡಿಲ್ಲ. ನಿಮಗೂ ಆ ಭಾಗ್ಯ ದೊರೆತಿದೆಯೋ ಏನೊ? ಅಗ್ನಿದೇವ ಎಷ್ಟು ಎತ್ತರಕ್ಕೆ ನಾಲಗೆ ಚಾಚಬಲ್ಲ, ನೀರೆರಚುವ ಯಂತ್ರಗಳು ಎಷ್ಟು ನಿಧಾನ ಬರಬಲ್ಲುವು, ಎಷ್ಟು ಎತ್ತರಕ್ಕೆ ಉಗುಳಬಲ್ಲವು. ಬೆಂಕಿ ಹೊತ್ತಿಕೊಂಡರೆ, ಸೈರನ್ ಊದುವುದು ಹೇಗಿರುತ್ತೆ ಭಯಾಕ್ರಾಂತರಾಗಿ ಜನ ಎಷ್ಟುಬೇಗ ಓಡಬಲ್ಲರು ಎಂದೆಲ್ಲ ನಮ್ಮ ಊರವರು ಆಗಲೇ ಚರ್ಚೆಮಾಡಲು ಯತ್ನಿಸುತ್ತಿದಾರೆ. ಇದರಿಂದ, ಈ ವರ್ಷ ಎಂದೂ ಇಲ್ಲದ ಜನ ಸಂದಣಿ ಇಲ್ಲಿ ಸೇರುವುದರಲ್ಲಿ ಸಂದೇಹವಿಲ್ಲ.

ಎಕ್ಸಿಬಿಷನ್ ಏರ್ಪಾಟು ನಮ್ಮೂರಲ್ಲಿ ಮೊದಲಾಗುವಾಗಲೇ ನೂರಾರು ಕಳ್ಳರು ನಾನಾ ಕಡೆಗಳಿಂದ ಆಗಮಿಸುವರು. ಕಿಸೆ ಪ್ರವೀಣರೂ, ಟೋಪಿ ಯುವರೂ ಬಳೆ ತೊಡಿಸುವವರೂ, ಮಂಕುಬೂದಿಯುವರೂ, ಡಂಗುಬಡಿಯುವ ವರೂ ಕಳಿಂಗ ಕೋವಿದರೂ. ಕೊಂಕುಳು ದೋಣ್ಣೆಯುವರೂ ಹತ್ತಾರು ಮಂದಿ ಬರುವರು. ಅವರಿಗೆ ಸರಕನ್ನೊದಗಿಸಲು ಹಲವು ಅಂಗಡಿಯುವರೂ ಸಿದ್ಧರಾದರು. ಅಲ್ಲದೆ, ಅವರಿಗೋಸ್ಕರ ಪ್ರತ್ಯೇಕ ಜನಸಂದಣಿ ಸೇರಿಸುವುದಕ್ಕಾಗಿ, ಪ್ರದರ್ಶನದ ಅಂಗಳದಲ್ಲಿ ಜನರಂಜಕರಾದ ಮಹಿಳಾಮಣಿಗಳಿಂದ ನೃತ್ಯಗಾನ ನಾಟಕಾದಿ ವಿಲಾಸಗಳನ್ನು ನಾವು ಅಳವಡಿಸುತ್ತೇವೆ. ಹೀಗಾಗಿ, ನಮ್ಮೂರು ಎಕ್ಸಿಬಿಷನ್ನಿನಲ್ಲಿ ಮುಖ್ಯಪಾತ್ರ ತಸ್ಕರ ಶಾಸ್ತ್ರ ಪ್ರವೀಣರದೇ; ಅವರ ಶಾಸ್ತ್ರ ಪ್ರದರ್ಶನಕ್ಕಾಗಿ ಇತರ ಸಂವಿಧಾನ, ಅಷ್ಟೆ.

ಅಲ್ಲದೆ, ಪ್ರದರ್ಶನ ನೋಡುವುದಕ್ಕೆ ಬರುವವರದೇ ಮುಖ್ಯ ಪ್ರದರ್ಶನ. ನೀವು ನಮ್ಮೂರಿಗೆ ಬಂದು, ಪ್ರದರ್ಶಹೊಂದಿ ಹೋಗಬೇಕೆಂದು ನಾವು ಊರಿನ ಪರ ಕೇಳಿಕೊಳ್ಳುತ್ತೇವೆ. ನಿಮ್ಮಂತೆಯೇ, ಸಾವಿರಾರು ಜನ ದಿನವೂ ಬಂದು, ಮೈ ತೋರಿಸಿ ಅವಲಕ್ಷಣ ಎನ್ನಿಸಿಕೊಂಡು ಹೋಗುತ್ತಾರೆ, ಭಯಪಡಬೇಡಿ. ನಿಮ್ಮ ಮತ್ತು ನಿಮ್ಮಹಾಗೆ ಬರುವ ಇತರ ಮನುಷ್ಯ ಪ್ರಾಣಿಗಳನ್ನೂ ಪ್ರಾಣಿನಿಗಳನ್ನೂ ನೋಟಕರಿಗೆ ಚೆನ್ನಾಗಿ ಪ್ರದರ್ಶಿಸಲು ನಾವು ಉಜ್ವಲನ್ನು ದೀಪಗ

ಸಾಲನ್ನು ಬೆಳಗಿಸುತ್ತೇವೆ. ಪ್ರದರ್ಶನಕ್ಕೆಂದು ಬರುವ ಹೆಣ್ಣು ಸಾಮಗ್ರಿಗಳನ್ನು ಅಲ್ಲಲ್ಲಿ ಓಡಾಡಿಸಿ, ಅಲ್ಲಲ್ಲಿ ನಿಲ್ಲಿಸಿ, ಅತ್ತಿತ್ತ ತಿರುಗಿಸಿ, ಎಲ್ಲರ ಕಣ್ಣಿಗೂ ಅವರು ಬೀಳುವಂತೆ ಮಾಡಲು ಪ್ರತ್ಯೇಕ ಏರ್ಪಾಟನ್ನು ಮಾಡುತ್ತೇವೆ.

ದೇಶವಿದೇಶಗಳಿಂದಲೂ ಇಂಥ ವಸ್ತುಗಳು ನಮ್ಮೂರಿಗೆ ಬಂದು ಪ್ರದರ್ಶಿತವಾಗುವ ನಿರೀಕ್ಷೆ ಇದೆ. ಆದ್ದರಿಂದ ಹೊಸ ನಮೂನೆಯ ವ್ಯಕ್ತಿಗಳ ಸಂದರ್ಶನಕ್ಕೆ ಇದು ಸುಸಮಯ. ಅವಳ ನಡೆನುಡಿ, ಉಡಿಗೆ, ತೊಡಿಗೆ, ಒಯ್ಯಾರ ಎಲ್ಲವೂ ಪ್ರದರ್ಶಿತವಾಗುತ್ತವೆ. ಸಮಾಜ ಶಾಸ್ತ್ರ, ಮನಃಶಾಸ್ತ್ರಗಳ ಅಭ್ಯಾಸಕರಿಗೆ ಇಂಥ ಸುಸಂಧಿ ಮತ್ತೆ ದೊರೆಯಲಾರದು. ದೀಪದ ಬೆಳಕಿನಲ್ಲಿ, ತಮಿಳು ಹಾಡುಗಳ ಹಿನ್ನೆಲೆಯಲ್ಲಿ, ಗೊಂದಲದ ಸಂದಿನಲ್ಲಿ, ಬಗೆಬಗೆಯ ಬಣ್ಣಗಳ ಬಿನ್ನಾಣದಲ್ಲಿ, ಮಾನವ ಜಾತಿಯ ವೈವಿಧ್ಯತೆಯನ್ನು ಕಂಡು ಕಣ್ಣೋಡಿಸುವುದು ಒಂದು ಮಹದ್ಭಾಗ್ಯವೇ ಸರಿ.

ಲೈಸನ್ಸ್ ದೊರೆಯುವ ಅನುಕೂಲಕ್ಕಾಗಿಯೂ, ಕೆಲವು ವಿಶೇಷ ರಿಯಾಯತಿಗಳಿಗಾಗಿಯೂ, ಶಾಲಾಕಾಲೇಜುಗಳಲ್ಲಿ ವ್ಯಾಸಂಗಮಾಡಲು ಉದ್ಯುಕ್ತರಾಗಿರುವ ಹಲವು ಮಂದಿ ತಲೆ ಕೆಟ್ಟ ಆದರ್ಶವಾದಿಗಳಿಗೋಸ್ಕರವೂ, ನಮ್ಮೂರು ಪ್ರದರ್ಶನವನ್ನು "ವೈಜ್ಞಾನಿಕ ವಿದ್ಯಾಪ್ರಚಾರ ಪ್ರದರ್ಶನ" ಎಂದು ಕರೆಯುತ್ತೇವೆ, ನಿಜ. ಆದರೆ, ಆ ಹೆಸರಿಗೆ ಹೆದರಿ, ಯಾರೂ ಅದನ್ನು ಬಹಿಷ್ಕರಿಸಬೇಕಾಗಿಲ್ಲ. ಅಲ್ಲಿ ನಡೆಯುವುದೆಲ್ಲ ಚಮತ್ಕಾರಗಳೇ; ಬರುವವರೆಲ್ಲ ಬಿಂಕದವರೇ; ಅಲ್ಲಿ ಸಂಗೀತವನ್ನೇಕೆ ಇನ್ನೂ ಅನೇಕವನ್ನು ನೀವು ಸೂರೆಮಾಡಬಹುದು. ನೋಡಿ ನೋಡಿಸಿ ಆನಂದಿಸಲು ಅದು ಒಂದು ಆಗರ.

——0——



# ಗೆಳೆಯನ ಕಾಗದ

---

ಪ್ರಿಯ ಹಾರು,

ಉರಿ ಉರಿ ಬೇಸಿಗೆಯಲ್ಲಿ ಬಿಜಾಪುರದಂತಹ ಊರಿನಲ್ಲಿ ಬೇಯುತ್ತಿರುವ ನನಗೆ ನಿನ್ನ ಪತ್ರನೋಡಿ "ಐಸ್ ಕ್ರೀಮ್" ತಿಂದ ಅನುಭವವಾಯ್ತು.

"ಅಯೋಗ್ಯ, ಬಹು ದಿನಕ್ಕೆ ಕಾಗದ ಬರೆದಿದ್ದಾನೆ. ಸರಿಯಾದ ಉತ್ತರ ಕೊಡೋಣವೆಂದು ಟೇಬಲ್ ಮುಂದೆ ಕುಳಿತರೆ "ಇನ್ಸ್ಪಿರೇಶನ್"ಗಿಂತ "ಪರ್ಸ್ಪಿರೇಶನ್"ಯೇ ಜಾಸ್ತಿಯಾಗಿ ತೋರಿದ್ದನ್ನು ಬರೆದಿದ್ದೇನೆ. ನೀವು ಗಂಡ ಹೆಂಡಿರು ಬಹಳ ಹುರುಪಿನಲ್ಲಿದ್ದೀರಿ. ಆಡಿಕೊಂಡು ಮಾತ್ರ ನಗಬೇಡಿ.

ನಿನ್ನ ಪತ್ರದಿಂದ ಈ ಕೆಳಗೆ ಕಾಣಿಸಿರುವ ಸಂಗತಿಗಳು ಹೊರಬಿದ್ದಿವೆ.

೧. ನೀನು ವಿದ್ಯಾರ್ಥಿದೆಶೆಯಲ್ಲಿ ನಿನ್ನಲ್ಲಿದ್ದ ಉದಾತ್ತಧ್ಯೇಯಗಳನ್ನೆಲ್ಲಾ ತಿಪ್ಪೆಗೆ ಎಸೆದು ಕುಟುಂಬ ಶಾಸ್ತ್ರದಲ್ಲಿಯ ಕೆಲವು ಪ್ರಯೋಗಗಳನ್ನು ಕೈಕೊಂಡಿದ್ದೀಯ.

೨. ನೀನು ಬೇಕಾದ್ದನ್ನು ಬರೆದರೂ ನಿಮ್ಮ ಮನೆಯಲ್ಲಿ ನೀನೇ "ಬ್ರಿಟಿಷ್ ಕಿಂಗು". ಕ್ಯಾಬಿನೆಟ್ಟು? ನಾನು ಬರೆಯುವ ಕಾರಣವಿಲ್ಲ.

೩. ನಿನ್ನ ವಿದ್ಯಾರ್ಥಿ ದೆಶೆಯ ಜಲತರಂಗವೇ ಈಗ ನಿನ್ನ ಭಾವನಾತರಂಗಗಳ ಮೂಲವಾಗಿದೆ.

೪. ನಿನ್ನ (ಕನ್ನಡ?) ಅಕ್ಷರವೂ ನಿನ್ನ ಭಾವನೆಯಂತೆಯೇ ಸುಧಾರಿಸಿವೆ.

೫. ನೀನು ಲುಚ್ಚಾ ಇದ್ದೀಯೆ. ಹಿಂದೂಸ್ಥಾನದ ಜನಸಂಖ್ಯೆಯ ಬಗ್ಗೆ ಗಮನಕೊಟ್ಟಿಲ್ಲ.

ಇದಕ್ಕೆಲ್ಲಾ ನೀನು ಬಾಯಿಮುಚ್ಚಿಕೊಂಡು ಒಪ್ಪಿಕೊಳ್ಳಲೇಬೇಕು.

ಏನು ಮಾಡಲಿ ಹೇಳು. ನಿನ್ನಂತಹ ಅಧಮರ, ಅಯೋಗ್ಯರ, ಅಪಾಪೋಲಿಗಳ ಸ್ನೇಹ ಮಾಡಿದ ಮೇಲೆ ನಿಮ್ಮನ್ನು ಹತೋಟಿಯಲ್ಲಿ ಇಡಬೇಕಾ

ಗುತ್ತೆ. ಎಲ್ಲವನ್ನೂ ತಿಳಿದು ಎತ್ತರದಿಂದ ನಡೆಯುವಂಥವನಾಗು! ಇಲ್ಲದಿದ್ದರೆ, "ಈ ಪ್ರಾಣಿಯನ್ನು ಸ್ವಲ್ಪ ನೋಡಿಕೊಳ್ಳಿ" ಎಂದು ಅಕ್ಕತಂಗಿಯರಿಗೆ (Rather ತಂಗಿಯುವರಿಗೆ) ಬರೆಯಬೇಕಾಗುವುದು. Husshar !!

ಇಲ್ಲಿ ನನ್ನ ವಿಚಾರ ಸ್ವಲ್ಪ ಕೇಳು: ನಾನು ಸುಖವಾಗಿ ಇದ್ದೇನೆ ಈಗ ನೀನು ನನ್ನನ್ನು ಗುರುತು ಸಹಾ ಹಿಡಿಯಲಾರೆ. ಹೋಗುತ್ತಿದ್ದರೆ ಎಲ್ಲರೂ ತಲೆ ಎತ್ತಿ ನೋಡುವ ಹಾಗೆ ಬೆಳೆದಿದ್ದೇನೆ ವ್ಯೆಯ್ಯಾ Considerably ಭಡಾಯಿಸಿದೆ. ಹೆಂಡತಿ, ಓ ಆಕೆ ವಂಡರ್‌ಫುಲ್ ಆಗಿದಾಳೆ. ಆದರೆ ಅವಳ ನಾಲಿಗೆ! ಅಬ್ಬಾ! I Shudder to think of it!! ಏನಯ್ಯಾ ಈ ಹೆಂಗಸರು! ಒಬ್ಬರಿಗಿಂತ ಒಬ್ಬರು. ಇವರನ್ನು ಮದುವೆಯಾಗುವವರು ಮೂರ್ಖರೆ? No Silly not at all! ನನ್ನ ಮಗು ಚೆನ್ನಾಗಿದಾನೆ.

ಚಂದ್ರನ ವಿಚಾರ ಮಾತ್ರ ಇನ್ನು ಮೇಲೆ ಬರೆಯಬೇಡ. ಅವನಲ್ಲಿ ಈಡಿಗನ ಯೋಗ್ಯತೆಯೂ ಇಲ್ಲ. ಅ....ಮಗ ಇಲ್ಲಿ ಮಂತ್ರಿಯೊಡನೆ ಬಂದಾಗ ನನ್ನ ವಿಚಾರ ಕೇಳಲೇಬೇಡವೇ? ಅಮೇರಿಕಾಕ್ಕೆ ಹೋದಮೇಲೆ ಅವನಿಗೆ ಕೊಂಬು ಬೆಳೆದಿದೆ. ಅವನಿಗೆ ಅಗ್ನ ಅದದ್ದು ನಿನ್ನಿಂದಲೇ ತಿಳಿಯಿತು. ಹಿಂದೂಸ್ಥಾನದಲ್ಲಿದ್ದಾಗ ಅವನಲ್ಲಿದ್ದ ಅಲ್ಪಸ್ವಲ್ಪ ಯೋಗ್ಯತೆಯನ್ನು Bekoofa ಅಮೇರಿಕಾದಲ್ಲಿ ಬಿಟ್ಟು ಬಂದಿದಾನೆ. ಅವನು ಅವರಿವರ ಜೀವನ ಚರಿತ್ರೆ ಬರೆದಂತೆಯೇ ನಾನೂ ಅವನ ಜೀವನ (ಬ್ರಹ್ಮಚರ್ಯ) ಚಿತ್ರವನ್ನು ಬರೆಯುವ ಮನಸ್ಸಾಗಿದೆ. ಅವನು ಅವೆಲ್ಲಾ ಬರೆದು ಅಮೇರಿಕಕ್ಕೆ ಹೋದ. ನಾನು ಮಾತ್ರ ಕೋರ್ಟಿಗೆ ಹೋಗಬೇಕಾಗುವುದು. ಅಷ್ಟೆ.

ಒಮ್ಮೆ ಸಪತ್ನೀಕನಾಗಿ ಇತ್ತ ಬಾ. ಬಿಜಾಪುರದ ಗೋಳ ಗುಮ್ಮಟನನ್ನು ನೋಡುವಿಯಂತೆ.

ಇಂತು, ನಿನ್ನ

**ರಾಮಣ್ಣ.**



ಕುಲಾವಿ ಮರೆಯ ಕುಹಕದಂತೆ, ನೆಲದ ಮರೆಯ ಹಗೇವಿನಂತೆ, ಕಾಗದ ಮರೆಯ ನೋಟನಂತೆ, ಕತ್ತಲೆ ಮರೆಯ ಸಿನಿಮದಂತೆ, ಬೆತ್ತಲೆ ಮರೆಯ ಜಾರ ತನದಂತೆ, ಭಾಷಣ ಮರೆಯ ದೂಷಣದಂತೆ, ಖಾದಿ ಮರೆಯ ಮೋಡಿಯಂತೆ, ಜಗವನಾರಿಸಿದೆ ನೋಡಾ ಮಾಯೆ, ಜಗಭಂಡ, ಯುಗಭಂಡ, ಕಾಂಬ ಚೇತನ ವೆಲ್ಲ ಸೈತನ ಕಂಡ್ಯ, ಹೇಳಿದಳು ನಮ್ಮ ಕೊರವಂಜಿ ಕಾಯುವಷರಂಜಿದೇವಿ.

# ರೆ—ರೆ?

---

ಇಂದು ನಾನು ಸತ್ತೆನಾದರೆ
ಇಂದೆ ಎನ್ನ ಹೂತರೆಂದಕೆ—
    ನೀನು ಪಾಪ ಎದೆಯಬಡಿದು
    ಅತ್ತು ಮೂಗ ಹಿಂಡುತ
    ನನ್ನ ಬಳಿಗೆ ಬಿಕ್ಕಿ ಬಂದು,

"ಇಕೊ! ನಾನು ಸಾಲ ಪಡೆದ ಹತ್ತು ರೂಪಾಯ್ ಮಿತ್ರನೆ"
    ಎಂದರಾಗ, ಮೆತ್ತಗೆದ್ದು
    ಮಣ್ಣ ಕೊಸರಿ ಕೈಯ ನೀಡಿ
    ಏನಿದೇನಿದಚ್ಚರಿ
    ಎನುವೆ, ಬುವಿಯ ಬಸುರಲಿ

*    *    *

ಇಂದು ನಾನು ಸತ್ತೆನಾದರೆ
ಇಂದೆ ಎನ್ನ ಹೊತ್ತರೆ
    ನೀನು ಪಾಪ ಓಡಿ ಬಂದು
    ಮೀನಿನಂತೆ ಬಿದ್ದ ಎನ್ನ
    ಬಳಿಗೆ ಬಂದು, ಬಿಕ್ಕುತ,

"ಕೊಡೋ, ನಾನು ಸಾಲ ಕೊಟ್ಟ ಹತ್ತು ರೂಪಾಯ್, ಮಿತ್ರನೆ"
    ಎಂದ ರಾಗ, ಮೆತ್ತಗಿದ್ದು
    ಓರೆಗಣ್ಣ ಮುಚ್ಚುತ
    ಕಾಲು ಕೈಯ್ಯನೆಲ್ಲ ಮುದುರಿ
    ಮತ್ತೆ ಸತ್ತು ಸುಮ್ಮನಿರುವೆ
    ಸಾವ ಸುಖದಲಿ

— ಪಾಟೀಲ.

# ಮಹಾತ್ಮ ಗಾಂಧಿ ರಸ್ತೆ

ನಮ್ಮೂರು ಪೇಟೆ ಬೀದಿಯಲ್ಲಿ ಈಗ ಹಾಲಿ ೧೦ ಹೋಟೆಲುಗಳು, ೫ ಔಷಧಿ ಷಾಪುಗಳು, ೨೦ ಬೀಡಿ ಸಿಗರೇಟ್ ಅಂಗಡಿ, ೨ ರೇಷನ್ ಡಿಪೊ, ೩ ಕಟ್ಟಿಗೆ ಅಂಗಡಿ, ೧೧ ಸೆಲೂನು, ೭ ಲಾಯರಾಫೀಸುಗಳು, ಮೂರು ಲಾಂಡ್ರಿ, ಎರಡು ಟಾಕೀಸ್, ಒಂದು ಬಾರ್, ಒಂದು ಹೆಂಡದಂಗಡಿ, ಒಂದು ಮಾರ್ವಾಡಿ ದುಖಾನ್, ಒಂದು ಯುನಾನಿ ದವಾಖಾನೆ—ಇಷ್ಟೂ ಇವೆ. ನಾಲ್ಕು 'ಪ್ಯಾರಿಸ್ ಹೇರ್ ಕಟಿಂಗ್ ಸೆಲೂನುಗಳು, ಮೂರು ಉಡುಪಿ ಹೋಟೆಲುಗಳು ಒಂದೇ ಕಟ್ಟಡದಲ್ಲಿ ಅಕ್ಕ ಪಕ್ಕದಲ್ಲಿವೆ! ಅದೇ ಕಟ್ಟಡದ ಮಹಡಿ ಮೇಲೆ ಜಿಲ್ಲ ಕಾಂಗ್ರೆಸ್ ಸಮಿತಿ ಕಛೇರಿ ಇದೆ. ಸರಳ ಮನೋಹರ ಬಾಯ್ಸ್ ಡ್ಯಾನ್ಸಿಂಗ್ ಸ್ಕೂಲ್ ಇದೆ. ಎನ್. ಜಿ. ಓ ಸಂಘದ ಬ್ರಾಂಚ್ ಕಛೇರಿ ಇದೆ! ಟಾಕೀಸ್ ಪಕ್ಕದಲ್ಲೇ ಬಾರ್ ಇದೆ ಅಂದನಲ್ಲ; ಅದರ ಪಕ್ಕಕ್ಕೇ 'ಬಾಟ' ಅಂಗಡಿ ಜೋಡಿಸಿದ್ದಾರೆ. ಮಹಡಿ ಮೇಲೆ ಒಂದು 'ಸ್ಟುಡಿಯೋ' ಇದೆ. ಉದ್ದಕ್ಕೂ ಲೆಕ್ಕವಿಲ್ಲದಷ್ಟು ಫಾನ್ಸಿ ಸ್ಟೋರ್ಸ್‌ಗಳಿವೆ. ಮೂರು ಮಾಂಸ ದಂಗಡಿಗಳೂ. ಅವುಗಳ ಜೊತೆಯಲ್ಲಿ ಬೆರತು ಕೊಂಡಿವೆ! 'ಮುಸ್ತಾಫ ಮಟನ್ ಸ್ಟಾಲ್' ಮಹಡಿ ಮೇಲೆ ಮುನಿಸಿಪಲ್ ರೀಡಿಂಗ್ ರೂಂ ಇದೆ. ಪತ್ರಿಕೆ ಗಳನ್ನು ತರಿಸುವುದನ್ನು ಮುನಿಸಿಪಾಲಿಟಿಯವರು ಈಗ ನಿಲ್ಲಿಸಿದ್ದಾರೆ. ಹಳೇ ಹರಾಜು ಇಶ್ತಿಹಾರ್‌ಗಳೂ, ನೋಟೀಸುಗಳು ಟೇಬಲ್ ಮೇಲೆ ಬಿದ್ದಿರುತ್ತವೆ. ಪ್ರತಿಯೊಂದು ಅಂಗಡಿ ಮುಂಭಾಗದಲ್ಲಿ ಇಬ್ಬರು ಹಸ್ತಸಾಮುದ್ರೀಕರೂ, ಮೂವರು ಪಕ್ಷಿ ಶಾಸ್ತ್ರಜ್ಞರೂ ಸದಾ ಕಾಲವೂ ತಮ್ಮ ಕಸುಬಿನಲ್ಲಿ ನಿರತರಾಗಿರು ತ್ತಾರೆ. ಬೆಳಗಿನ ಹೊತ್ತು ಸಿನಿಮಾನಗಳ ಮುಂದೆ ಹಾವಾಡಿಗರು, ಯಕ್ಷಣಿ ನಿಪುಣರು ಹೆಂಡಕುಡುಕರು, ಲಾವಣಿ ಬಡುಕರು ಮುಂತಾದವರುಗಳಿಂದ ವಿವಿಧ ವಿನೋದಾವಳಿಗಳು ನಡೆಯುತ್ತವೆ. ಸಂಜೆ ಹೊತ್ತು ಅದೇ ಸ್ಥಳದಲ್ಲಿ ಹಕೀಮರು, ಫಕೀರರು, ಗೋಸಾಯಿಗಳು ನೇಪಾಳಿಗಳು, ಭೂತಾನಿಗಳು, ರೆಫ್ಯೂಜಿಗಳು ಸಭೆ ಸೇರಿಸಿ, ಸರ್ವ ರೋಗ ಶಮನಿಗಳಾದ ಮೂಲಿಕೆ, ಗುಳಿಗೆ, ಹಿಮಾಲಯ ಬೇರು, ಮಲಯ ನಾರು, ಹುಲಿ ಕೊಬ್ಬು, ಕರಡಿ ಮುಲಾಮು, 'ಕರಿಹಿಂಗು' ಮುಂತಾದ ಆಯುರ್ವೇದ ಔಷಧಿಗಳನ್ನು ಸಾರ್ವಜನಿಕರಿಗೆ

ಹಂಚಿ ಹಣ ಕಸಿಯುತ್ತಾರೆ. ಕೇಶವರ್ಧನಿ, ಕೇಶಧ್ವಂಸನಿ, ಕೇಶಬಂಧು, ಕೇಶಕೀಳಾಂಜನ, ತಿಮಿರಾಂಜನ ಮುಂತಾದ ತೈಲ ಸಾಮಗ್ರೀಯಗಳೂ ಇಲ್ಲಿ ಮಾರಲ್ಪಡುತ್ತವೆ. ಕಳೆದ ತಿಂಗಳು ಮಂತ್ರವಾದಿಗಳೊಬ್ಬರು ಇದೇ ಬೀದಿಯಲ್ಲಿ ಒಂದು ಅಂಗಡಿ ಬಾಡಿಗೆಗೆ ತೆಗೆದುಕೊಂಡು 'ಶಕ್ತಿ ಮಂತ್ರ ಚಿಕಿತ್ಸಾಲಯ' ಅಂತ ಬರೆದ ಒಂದು ಬೋರ್ಡನ್ನು ತಗಲಿಸಿ ಲಕ್ಷಣವಾಗಿ ಬಿಸಿನೆಸ್ ಪ್ರಾರಂಭಿಸಿದರು. ಹಾವು ಕಡಿದವರು, ಚೇಳು ಕುಟುಕಿದವರು, ದವಡೆ ಊದಿದವರು, ಬುರುಡೆ ಕೆಟ್ಟವರು, ಮಂಡಿ ಹಿಡಿದವರು, ಪರೀಕ್ಷೆ ಹುಡುಗರು, ಚುನಾವಣೆ ಉಮೇದುವಾರರು, ಶೂನ್ಯ ಮಾಡಿಸುವವರು, ರೇಷನ್ ಸಿಕ್ಕದ ಗೃಹಸ್ಥರು; ಬಡ್ತಿ ಸಿಕ್ಕದ ಗುಮಾಸ್ತರು, ಅಳಿಯಂದರು, ಸೊಸೆಯಂದರೂ— ಎಲ್ಲರೂ ತಂಡೋಪತಂಡವಾಗಿ ಈಗ 'ಶಕ್ತಿ ಚಿಕಿತ್ಸಾಲಯಕ್ಕೆ' ಮಂತ್ರ ಹಾಕಿಸಿಕೊಂಡು ಯಂತ್ರ ಕಟ್ಟಿಸಿಕೊಂಡು ಬರುತ್ತಾರೆ.

ರಸ್ತೇ ರಿಪೇರಿ ಮಾಡಿಸಬೇಕೆಂದು ಮೂರು ವರ್ಷದ ಹಿಂದೆ ಮುನಿಸಿಪಾಲಟಿಯವರು ಜಲ್ಲಿ ತರಿಸಿದ್ದು ಇನ್ನೂ ಹಾಗೇ ಇದೆ. ಫುಟ್‌ಪಾತಿನ ಮೇಲೆ ರಾಶಿ ಹಾಕಿಸಿದಾರೆ. ರಸ್ತೆ ರಿಪೇರಿ ಮಾತೇ ಎತ್ತುವುದಿಲ್ಲ. ಚುನಾವಣೆ ಹೊತ್ತಿಗೆ ಜಲ್ಲಿ ಉಪಯೋಗಕ್ಕೆ ಬರುತ್ತೆ ಎಂದು ಜನಗಳು ಲೆಕ್ಕಾಚಾರ ಹಾಕುತ್ತಾರೆ! ಈಗ ಕಲಾಯಿಮಾಡುವ ಸಾಬರಿಗೆ ಬಹಳ ಉಪಯೋಗವಾಗಿದೆ. ಭಾರಿ ಭಾರಿ ಕಡಾಯಿಗಳನ್ನು ಜಲ್ಲಿ ವೇದಿಕೆ ಮೇಲೆ ಸಾಲಾಗಿ ಪೇರಿಸುತ್ತಾರೆ. ಪ್ರತಿ ಜಲ್ಲಿ ರಾಶಿಯ ಪಕ್ಕದಲ್ಲೂ ಕಲಾಯಿಮಾಡುವ ಓಪನ್ ವರ್ಕ್‌ಷಾಪುಗಳಿವೆ!

ಪ್ರತಿ ಹೋಟೆಲಿನ ಮೇಲೂ ಒಂದೊಂದು ಹರಕು ರಾಷ್ಟ್ರಧ್ವಜ ಹಾರಾಡುತ್ತಿದೆ! ಬಿಸಲು ಮಚ್ಚಿ ಮೇಲೆ 'ಭವಿಷ್ಯ' ಎಂದು ಬರೆದ ಬೋರ್ಡುಗಳನ್ನು ಬಡಿದಿದಾರೆ! ಹೋಟೆಲುಗಳ ಬಚ್ಚಲು ನೀರು ಬೀದಿಗೇ ಹರಿಯುತ್ತೆ! ಒಳಚರಂಡಿ ವ್ಯವಸ್ಥೆ ಕುಸಿದಿದೆ! ಮಳೆ ಬಂದ ದಿನ ಹಲವಾರು ಜನ ನಿರಾಯಾಸವಾಗಿ ಜಾರಿ ಬೀಳುತ್ತಾರೆ. ಬೀದಿಗೆಲ್ಲ ನಾಲ್ಕು ಮುನಿಸಿಪಲ್ ನಲ್ಲಿಗಳಿವೆ. ಒಂದರಲ್ಲಿ ರಾತ್ರಿ ೯ರ ಮೇಲೆ ನೀರು ಬರುತ್ತೆ. ಬಾಕಿ ನಲ್ಲಿಗಳಿಗೆ ನೀರು ಹತ್ತುವುದೇ ಇಲ್ಲ!

ರಸ್ತೆಯ ಇಕ್ಕೆಡೆಗಳಲ್ಲೂ ಬಣ್ಣ ಬಣ್ಣವಾದ ಜಾಹಿರಾತು ಬೋರ್ಡುಗಳನ್ನು ತೂಗುಹಾಕಲಾಗಿದೆ. ಏಳು ಗಂಟೆ ಬ್ಲೇಡಿನ ವಪನ ವೈಶಿಷ್ಟ್ಯವನ್ನು ಸಾರುವ ನುಣ್ಣನೆಯ ಕೆನ್ನೆಯ ಚಿತ್ರ; ಬೆಂಡೆಕಾಯಿಯಂತಹ ಬೆರಳುಗಳ ಸಂದಿನಲ್ಲಿ ವಿಲ್ಸ್ ಸಿಗರೇಟ್ ಸಿಕ್ಕಿಸಿಕೊಂಡು ಕಿಲಕಿಲ ನಗುತ್ತಿರುವ ಪಾಶ್ಚಾತ್ಯ ಬೆಡಗುಗಾರ್ತಿಯೊಬ್ಬಳ ಚಿತ್ರ, ಒರಟು ಮುಖಕ್ಕೆ ಮಂಜಿನ ಚಿಕಿತ್ಸೆಯನ್ನು ಸೂಚಿಸುವ 'ವಸೌಂಟ್ ಎವರೆಸ್ಟ್ ಮಂಜು ಕಾರ್ಖಾನೆ'ಯವರ ಕಲಾತ್ಮಕ

ಚಿತ್ರ, ಹೆಣ್ಮಣಿಗಳ ಘನತೆ ಗೌರುವಗಳಿಗೆ 'ಲಿಪ್‌ಸ್ಟಿಕ್' ಹೇಗೆ ಸಹಕಾರಿ ಎಂಬ ಸೂಕ್ಷ್ಮವನ್ನು ಸಾರುವ 'ಸಾವಿತ್ರಿ ಲಿಪ್‌ಸ್ಟಿಕ್ ಕಂಪೆನಿ'ಯವರ, 'ಬಿರಿದ ಕೆಂದುಟಿಗಳ' ಚಿತ್ರ—ಹೀಗೆ ಈ ತೆರನ ಇನ್ನೂ ಅನೇಕ ಕಲಾಕೃತಿಗಳಿಂದ ಇಡೀ ಬೀದಿಯೇ ಒಂದು ಚಿತ್ರಶಾಲೆಯಂತೆ ಕಂಗೊಳಿಸುತ್ತಿದೆ. ಮಾಸಲು ಗೋಡೆಗಳ ಮೇಲೆ ರಂಗಿನ ಸಿನಿಮಾನ ಪೋಸ್ಟರುಗಳನ್ನು ಹಂಚುವುದರಿಂದ ಇಡೀ ರಸ್ತೆಗೇ ಒಂದು ತರಹ ಮೆರಗು ಬಂದಿದೆ.

ಹೋಟಲಿನವರೂ, ಅಂಗಡಿಯವರೂ ಬೀದಿಯಲ್ಲಿ ಲೌಡ್‌ಸ್ಪೀಕರುಗಳ ನ್ನಿಟ್ಟು ಹೊಸಾ ಹೊಸ ಸಿನಿಮಾ ಹಾಡುಗಳನ್ನು ಬೆಳಗ್ಗೆಯಿಂದ ರಾತ್ರಿವರಿಗೂ ಪ್ರಸಾರ ಮಾಡುತ್ತಾರೆ. ಇದರ ಜೊತೆಗೆ ಲೌಂಡ್ ಸ್ಪೀಕರುಗಳನ್ನು ತಲೆಗೆ ಕಟ್ಟಿಕೊಂಡು ಹಲವು ವ್ಯಾನುಗಳು ಒಂದಾದಮೇಲೊಂದು ಸುತ್ತುತ್ತ. ನೆಸ್ಪ್ರದ ಮಹತ್ವವನ್ನೂ, ಜಾಡೀ ಬೀಡಿಯ ಪರಿಶುದ್ಧತೆಯನ್ನೂ ತಮಾವ್ ಸೋಪಿನ ಚರ್ಮ ಸೌಂದರ್ಯ ರಹಸ್ಯವನ್ನೂ, 'ಹಲ್ಲುಜ್ಜ್' ದಂತಧಾವನ ಚೂರ್ಣದ ಪ್ರಖ್ಯಾತಿಯನ್ನೂ ಸಾರಿ ಹೇಳುತ್ತಿರುತ್ತವೆ.

ಈ ಗಡಿಯಲ್ಲಿ ಪ್ರತಿ ದಿನವೂ ಒಂದು ಲಾರಿ ಅಪಘಾತ, ಒಂದು ಜಟಕ ಸೈಕಲ್ ಪ್ರಸಂಗ, ೬ ಪಿಕ್ ಪಾಕೆಟ್ ಘಟನೆಗಳೂ ಸಾಮಾನ್ಯವಾಗಿ ನಡೆಯು ತ್ತವೆ.

ಇದೇ ರಸ್ತೆಯಲ್ಲೇ ಮೂರು ವೇಶ್ಯಾ ಗೃಹಗಳೂ, ನಾಲ್ಕು ಜೂಜಿನ ಕಟ್ಟೆ ಗಳೂ ಇವೆ ಎಂದು ಜನರು ಹೇಳುತ್ತಾರೆ.

ಮೊನ್ನೆ ವನಮಹೋತ್ಸವದ ಸಡಗರದಲ್ಲಿ ಮುನಿಸಿಪಾಲಿಟಿಯವರು ರಸ್ತೆಯ ಎರಡು ಅಂಚಿನಲ್ಲೂ ಮಾರಿಗೊಂದು ಗುಂಡಿ ಹೊಡಸಿದರು. ಯಾವ ಜಾತಿ ಸಸಿಗಳನ್ನ ನೆಡಬೇಕೆಂಬ ವಿಚಾರದಲ್ಲಿ ಬಿನ್ನಾಭಿಪ್ರಾಯಬಂದಿದ್ದರಿಂದ ಸಸಿಗಳನ್ನ ಇನ್ನೂ ನೆಟ್ಟಿಲ್ಲ. ಈಗ ಇಲ್ಲಿ ರಾತ್ರಿ ಹೊತ್ತು ನಡೆಯುವುದಕ್ಕೆ ಗಾಬರಿಯಾಗುತ್ತದೆ. ನಾಲ್ಕೈದು ಬೀದಿ ದೀಪಗಳು ಬೇರೆ ಕೆಟ್ಟುಹೋಗಿವೆ!

ಈ ರಸ್ತೆ ನಮ್ಮೂರೂ ಸಾರ್ವಜನಿಕ ಜೀವನದಲ್ಲಿ ಬಹು ಮುಖ್ಯ ಪಾತ್ರ ವಹಿಸುತ್ತಿದೆ. ಈ ರಸ್ತೆಯ ಬಗ್ಗೆ ನಾನು ಇಷ್ಟು ಖಚಿತವಾದ ಅಂಕಿ ಅಂಶ ಗಳನ್ನು ಶೇಖರಿಸಿರುವುದಕ್ಕೆ ಕಾರಣವಿದೆ.

ಮೊನ್ನೆ ಅಕ್ಟೋಬರ್ ೨ನೆ ತಾರೀಕು ನಮ್ಮೂರು ಪುರಸಭೆಯವರು ತಿಂಗಳು ಸಭೆ ಸೇರಿ ಈ ರಸ್ತೆಯ ಹಳೆ ಹೆಸರನ್ನು ರದ್ದುಗೊಳಿಸಿ "ಮಹಾತ್ಮ ಗಾಂಧಿ ರಸ್ತೆ" ಎಂದು ಹೊಸದಾಗಿ ನಾಮಕರಣಮಾಡಿದರು.

—ಚಾ. ರಾ.

("ಜಾಚೀಪಪುಕ")

# ಭಗ್ನದಂತ ಗಣಪತಿ

(ಕೊರವಂಜಿಯ ಚಿತ್ರವೊಂದರಿಂದ ಪ್ರೇರಿತ.)

---

ಇದ್ದುದೊಂದು ಗಟ್ಟಿಹಲ್ಲು—
ಅದೂ ಮುರಿದು ಹೋಯಿತೇ!
ಚೂರು ಚಿಕ್ಕದೊಂದು ನಿಂತು—
ದವಡೆ ಊದಿ ನೋಯಿತೇ!

ಭಕ್ತಕೊಟ್ಟ ಕರಿಗಡುಬು!
(ವಿಟಪಿಯ ವಾಸನೇ!)
ಮೂಗು ಮುಚ್ಚಿ ಕಡಿದಗಿದೆ!
(ಅಯ್ಯೋ! ನನ್ನ ದಾಸನೇ!)

ಏನಯ್ಯಾ ಇದು, ಬರಿ ಕಲ್ಲು!
ಕಣಕವೆಲ್ಲ ಮರುಳು! ತ್ಥು!
ಹೂರಣದಲೊ—ಹದವಾಗಿ
ಅರಿಸಿಟ್ಟ ಹರಳು! ತ್ಥು!

ಹೋಯಿತಯ್ಯಾ, ಹಲ್ಲು! ಹರಾ!
ದಂತವೈದ್ಯರಿಲ್ಲಪಾ !
ವಿಘ್ನ ರಾಜನೇಕದಂತ
ಭಗ್ನವಾಯಿತಲ್ಲಪಾ!

ಕಾಯುವಾಗ ಇವನ ಮನೆ!
ರವೆಯ ಕೊಟ್ಟನಾವನೋ!
ಬೆಲ್ಲದಲ್ಲಿ ಸಣ್ಣ ನೊರಜು
ಬೆರಸಿಬಿಟ್ಟನಾವನೋ!

ಬಾರೊ ಇಲಿಯೆ; ಪರಜವನ
ಮುಖವ, ಮೈಯ, ಕಾಲ!
ಹೋಗು ಹಾವೆ: ಮೂಗಿಗವನ
ಚುಚ್ಚು ನಿನ್ನ ಬಾಲ!

ಮೊದಲಿ ಸಣ್ಣ ನನ್ನ ಮುಖ!
ಮೇಲೆ ಈಗೀ ಊತ!
ಅಯ್ಯೋ ಭಕ್ತ! ನಿನ್ನ ಕಡುಬೆ!
ಕಲ್ಲು! ಜಿಡ್ಡು! ನಾತ!

ಅಯ್ಯೋ ನೋವು! ನರಳಲಾರೆ!
ಏಕೆ ಬಂತೋ ಹಬ್ಬ!
ಹಲ್ಲು ಮುರಿದು ದವಡೆ ಊದಿ—
ಅಬ್ಬಬ್ಬಬ್ಬಬ್ಬಬ್ಬ!

— ಮೂಷಿಕ.




ಚುನಾವಣಾ ಪೂಂಗಿ ಬಾರಿಸಿದರೆ 'ಬುಸ್' ಅನ್ನುತ್ತಂತೆ

# ಸುಪ್ತಚಿತ್ತ ಹೊರಹಾಕಿದ ಅಣಿಮುತ್ತು

ಅರುಣಾಚಲಂನ ಕೈಗೆ ಒಂದು ದಿನ ಒಂದು ಹಳೆಯ ರೀಡರ್ಸ್ ಡೈಜೆಸ್ಟ್ ಪ್ರತಿ ಸಿಕ್ಕಿತು. ಅದರಲ್ಲಿ ಸುಪ್ತಚಿತ್ತದ (subconscious mind) ತುರಿತಾಗಿ ಬರೆದಿದ್ದ ಒಂದು ಲೇಖನವಿತ್ತು. ಎಷ್ಟೋ ಮಂದಿ ವಿಜ್ಞಾನಿಗಳೂ ಸಾಹಿತಿಗಳೂ ಇತರ ಕ್ರಿಯಾಪಟುಗಳೂ ತಮ್ಮ ನಿರ್ಮಾಣ ಕಾರ್ಯವನ್ನು ಕುರಿತು ಸಾಕಷ್ಟು ವಿಚಾರ ನಡೆಸಿ ಹಾಗೆ ಚಿಂತನದ ಪರಿಣಾಮವಾಗಿ ಮನಸ್ಸಿನಲ್ಲಿ ಮೂಡಿಬಂದ ಅಂಶಗಳನ್ನು ಸುಪ್ತಚಿತ್ತದೊಳಕ್ಕೆ ತಳ್ಳಿ ಸ್ವಸ್ಥವಾಗಿ ನಿದ್ದೆಹೋಗಿ ಬಿಡುತ್ತಿದ್ದರಂತೆ. ಹೀಗೆ ಜಾಗ್ರತಮನಸ್ಸು ಸ್ವಸ್ಥವಾಗಿರುವಾಗ ಸುಪ್ತ ಚಿತ್ತವು ಕೆಲಸಮಾಡತೊಡಗಿ ಮೊದಲಿನ ಆಲೋಚನಾಂಶಗಳೆಲ್ಲ ಪರಿಪಕ್ವವಾಗಿ ಸಮನ್ವಯುಗೊಂಡು ಅವರ ಸಾಧನೆಯ ಮುಕ್ತಾಫಲಗಳು ಹೊರಬೀಳುತಿದ್ದವಂತೆ. ಆಗ ವ್ಯಕ್ತಿಯು ನಿದ್ದೆಗಣ್ಣಿನಲ್ಲಿಯೇ ಎದ್ದುಬಿಟ್ಟು ಪಕ್ಕದಲ್ಲಿ ದೊರಕಿದ ಕಾಗದದಲ್ಲಿ ನಾಲ್ಕಕ್ಷರಗಳನ್ನೋ ಪಂಕ್ತಿಗಳನ್ನೋ ಗೀಚಿ ಮಲಗುತ್ತಿದ್ದರಂತೆ ಅವೇ ಕೊನೆಗೆ ಮಹಾ ಯೋಜನೆಗಳಿಗೆ ಅಂಕುರಪ್ರಾಯವಾದದ್ದೂ ಅಥವ ಮಹಾ ಸೂತ್ರಗಳೋ ಸಿದ್ಧಾಂತಗಳೋ ಕವಿತೆಗಳೋ ಆಗಿಬಿಟ್ಟವೆಂಬುದಕ್ಕೆ ಹಲವು ನಿದರ್ಶನಗಳನ್ನು ಲೇಖನದಲ್ಲಿ ಉಲ್ಲೇಖಿಸಿದ್ದರು. ಅಂತೂ ಆ ಲೇಖನ ಅರುಣಾಚಲಂನ ಮನಸ್ಸಿಗೆ ಚೆನ್ನಾಗಿ ಹಿಡಿಸಿತು. ಇಂದಿನಿಂದ ಅವನು ಒಂದು ನೋಟ್ ಪುಸ್ತಕವನ್ನೂ ಸೀಸದ ಕಡ್ಡಿಯನ್ನೂ ಹಾಸಿಗೆಯ ಪಕ್ಕದಲ್ಲಿ ಖಾಯಂ ಆಗಿ ಇರಿಸಿಕೊಂಡು ಮಲಗತೊಡಗಿದ.

ಆದರೆ ಅರುಣಾಚಲಂನದು ಕುಂಭಕರ್ಣ ನಿದ್ರೆ. ರಾತ್ರಿ ಮಲಗಿದರೆ ಮುಂಜಾನೆ ಏಳುವ ತನಕ ಅವನೊಂದು ಮರದ ಕೊರಡಿನಂತೆ. ತಾನು ಮಲಗಿದ್ದಾಗ ತನ್ನ ಸುಪ್ತಚಿತ್ತ ಎಂದಾದರೂ ಕೆಲಸಮಾಡುವುದುಂಟೇ ಎಂದು ಅವನ ಶಂಕೆ. ಆದರೂ ಅವನು ನಿರಾಶನಾಗಲಿಲ್ಲ. ಬೆಳಗ್ಗೆ ಎದ್ದವನೇ ನೋಟ್ ಪುಸ್ತಕ ತೆರೆದು ನೋಡುತ್ತಿದ್ದ. ಆದರೆ ಹಾಳೆಗಳೆಲ್ಲ ಯಾವಾಗಲೂ ಬರಿದಾಗಿಯೇ ಇರುತ್ತಿದ್ದವು.

ಒಂದು ದಿನ ಅರುಣಾಚಲಂ ಏಳುವಾಗ ಪಕ್ಕದ ಟೀಪಾಯ್ ಮೇಲೆ ಇಟ್ಟಿರುತ್ತಿದ್ದ ಪುಸ್ತಕವೂ ಸೀಸದ ಕಡ್ಡಿಯೂ ಅವನ ಹಾಸಿಗೆಯಲ್ಲಿದ್ದವು. ಅರುಣಾಚಲಂ ಹಿಗ್ಗಿಹೋದ. ನೋಟ್ ಪುಸ್ತಕ ಕೈಗೆತ್ತಿಕೊಂಡ; ಆದರೆ ಪಕ್ಕನೆ ತೆರೆದು ನೋಡಲಾರದಷ್ಟು ಉದ್ವಿಗ್ನನಾಗಿದ್ದ. ಅದರಲ್ಲಿ ಏನು ಉಲ್ಲೇಖಿತವಾಗಿವೆಯೋ ಯಾರು ಬಲ್ಲರು! ಎರಡು ಮೂರು ದಿನಗಳಿಂದ ತಾನು ಯೋಚಿಸುತ್ತಿದ್ದುದೆಲ್ಲ ಯಾವುದರ ಕುರಿತಾಗಿ? ಮೊದಲನೆಯದಂತೂ ಕ್ರಾಸ್ ವರ್ಡಿನ ತೊಡಕು. ಎರಡನೆಯದಾಗಿ ದೀಪಾವಳಿಗೆ ಊರಿಗೆ ಹೋಗುವುದಕ್ಕೆ ಹೊಲಿಸಬೇಕಾದ ಸೂಟು ಉಣ್ಣೆಯದೋ ಕಾಟನ್ನೇ ಸಾಕೊ ಎಂಬ ಸಮಸ್ಯೆ. ಮೂರನೆಯದಾಗಿ ತನ್ನ ಪದ್ಮಳನ್ನು ಪದ್ದಿ, ಪದ್ದು, ಪದ್ಮಾ, ಪದ್ಮೆ, ಪದ್ಮಾಕ್ಷಿ, ಡೀಯರಿ, ಡಾರ್ಲಿಂಗ್ ಅಥವ ಇನ್ನಾವ ಹೆಸರಿನಲ್ಲಿ ಕರೆಯಬೇಕೆಂಬುದಾಗಿ ಒಂದು ದೊಡ್ಡ ವಿಚಾರದ್ವಂದ್ವ ಎದುರಾಗಿತ್ತು. ಏನೇ ಇರಲಿ—ಇವುಗಳ ಪೈಕಿ ಯಾವುದೋ ಒಂದರ ಕುರಿತು ನಿರ್ಧಾರವನ್ನು ಸುಪ್ತಚಿತ್ತ ಹೊರತಳ್ಳಿದೆ. ಕ್ರಾಸ್‌ವರ್ಡಿನ ಕರೆಕ್ಟ್ ಸೆಲ್ಯೂಶನ್ ಆಗಿರಲೂಬಹುದು. ಅಥವ ಇನ್ನು ಲ್ಯಾಬೊರೇಟರಿಯಲ್ಲಿ ನಡೆಸಿದ ಪ್ರಯೋಗಗಳ ಪರಿಣಾಮವಾಗಿ ಏನಾದರೂ ಸಿದ್ಧಾಂತ ಗಿದ್ಧಾಂತ....? ಹಾಗೇನಾದರೂ ಆಗಿದ್ದರೆ ಆ ಶೋಧನೆಗೆ ಏನನ್ನುತ್ತಾರೋ ವಿಜ್ಞಾನಿಗಳು! ಅರುಣಾಚಲಂ ಇಫೆಕ್ಟ್....? ಚಲಂ ಸಿದ್ಧಾಂತ....? ಅರುಣ್ ಥೀಯೊರಿ ...?

ಅರುಣಾಚಲಂ ನೋಟುಬುಕ್ ತೆರೆದ. ಹೌದು, ಅದರಲ್ಲಿ ಏನೋ ಬರೆದಿತ್ತು. ಅವನು ಓದಿ ನೋಡಿ ಪುಸ್ತಕವನ್ನು ಎಸೆದ ರಭಸಕ್ಕೆ ಕೋಣೆಯ ಗೋಡೆಯೊಂದು ಅಡ್ಡಲಾಗಿಲ್ಲದಿದ್ದರೆ ಅದು ಒಂದು ಮೈಲಿ ದೂರ ಹೋಗಿ ಬೀಳುತ್ತಿತ್ತು! ಅರುಣಾಚಲಂನ ಕೋಪವು ನಾಚಿಕೆಯಲ್ಲಿ ಕೊನೆಗೊಂಡಿತು. ಯಾರಾದರೂ ತನ್ನನ್ನು ನೋಡುತ್ತಿರುವರೋ ಎಂದು ಅವನು ಸುತ್ತಲೂ ಒಮ್ಮೆ ನೋಡಿಕೊಂಡ ನೋಟ್ ಬುಕ್‌ನಲ್ಲಿ ಬರೆದಿದ್ದುದು ಇಷ್ಟೆ. "Cafe pleasant—Rajanna's turn" "ಕೆಫೆ ಪ್ಲೆಸೆಂಟ್ — ರಾಜಣ್ಣನ ಸರದಿ"— ಎಂದು ಮಾತ್ರ. ಅದೇ ಅವನ ಸುಪ್ತ ಚಿತ್ತ ಹೊರಹಾಕಿದ ಆಣಿಮುತ್ತು!

ಅಷ್ಟರಲ್ಲಿ "ಚಲಂ... ನಮಸ್ತೇ" ಎನ್ನುತ್ತಾ ರಾಜಣ್ಣ ಒಳಗೆ ಬಂದನು.

—ಎ. ಎಸ್. ರಾಮಕೃಷ್ಣ.



# ದೀಪಾವಳಿ ದಿನ

---

**ಆತ :**—ಜ್ಞಾನದ ಬೆಳಕನ್ನ ನೀಡೋ ಜನಕ್ಕೆ
ಸೊಡರಿನ ಬೆಳಕೇಕೆ?
ಮನಸ್ಗೆ ರುಚೀನ ನೀಡೋ ನನಗೆ
ನಾಲ್ಗೇ ರುಚಿ ಬೇಕೆ?

**ಆಕೆ :**—ಅಷ್ಟೇ ಅಲ್ಲ!
ಇಂದ್ರ ಚಂದ್ರ ಭವನಗಳಿದ್ರೆ
ಹಸಿವೆ ಮಾತೇಕೆ?
ಬಣ್ಣದ ಮಾತು ಬೆಳಗ್ತಾ ಇದ್ರೆ
ಚಟಾಕಿ ಮುತಾಪು ಬೇಕೆ?

—ಸರೋಜಿನಿ ಅರೂರ್.

---



**ಆಕೆ:**—ಈಗ ಹೆಂಗಿದೇ! ತಲ್ನೋವು ಕಡಿಮೆಯಾಗೈತಾ.

**ಆತ:**—ಬೆಳಗಿಂದ ಮೂರ್ಸಾರಿ ಏನೋ ಒಂದು ಗಾಜಿನ ಕಡ್ಡಿ ಬಾಯಲಿಟ್ಟು ಚೀಪು ಅಂದರು. ಈಗ ಸ್ವಲ್ಪ ಹುಷಾರಾಗಿದ್ನಿ.

# ರಂಗುವಿನ ಪ್ಲಾನ್

— ೧ —

ಆ ಕಾಗದ ನೋಡುತ್ತಿದ್ದ ಹಾಗೆ ರಂಗು ಕುಣಿದು ಕುಪ್ಪಳಿಸುವಂತಾದ. ಅಷ್ಟು ಹಿರಿ ಹಿಗ್ಗಿದ. ಹಳೆಯ ಸ್ನೇಹಿತ. ರಜಾಕ್ಕೆ ಇವನೂರಿಗೆ ದೆಹಲಿಯಿಂದ ಬರುವುದಾಗಿ ಬರೆದಿದ್ದ. ಇಬ್ಬರೂ ಒಟ್ಟಿಗೆ ಓದಿದವರು, ಅವನು ಐ ಸಿ.ಎಸ್. ನಲ್ಲಿ ಮೊದಲಿಗನಾಗಿ ದೆಹಲಿ ಸೇರಿದ. ಇವನು ಇಲ್ಲಿ ಸಿವಿಲ್ ಸರ್ವಿಸಿನಲ್ಲಿ ಮೊದಲಿಗನಾಗಿ ಇಲ್ಲೇ ಉಳಿದಿದ್ದ. ಸುಖಸಂಪತ್ತುಗಳಿಂದ ಕೂಡಿದ ಇಬ್ಬರು ಹಳೆಯ ಸ್ನೇಹಿತರ ಸಮಾಗಮ ಬಲು ಚೆನ್ನು ಅಲ್ಲವೇ?

ಆದರೆ ಮೊದಲ ಖುಷಿ ಇಳಿದ ಮೇಲೆ ರಂಗುವಿಗೆ ಸ್ವಲ್ಪ ಯೋಚನೆಗಿಟ್ಟು ಕೊಂಡಿತು. ಅವನ ಮನೆಯಲ್ಲಿ ಯಾವ ಕೊಠಡಿಯಲ್ಲಿ ತನ್ನ ಸ್ನೇಹಿತನನ್ನು ಇಳಿಸುವುದು ಎಂದು ಯೋಚಿಸಿದಾಗ ಒಂದು ಕಳಂಕ ಕಂಡುಬಂತು. ಸ್ನೇಹಿತ ನೇನೋ ಒಬ್ಬನೇ ಬರುತ್ತೇನೆ ಎಂದು ಬರೆದಿದ್ದ. ಅಂದರೆ ಒಂದು ಚಿಕ್ಕ ಕೊಠಡಿ ಸಾಕು. ಆದರೆ ಆ ಸ್ನೇಹಿತನಿಗೆ ಸಿಗರೇಟ್ ಅಭ್ಯಾಸ. ಅದಕ್ಕಿಂತಲೂ ದೊಡ್ಡ ದುರಭ್ಯಾಸ, ಸೇದಿದ ಕಡೆಯೇ ಬೂದಿ ಎರಚುವುದು. ತನ್ನ ಹೆಂಡತಿಗೆ ಮನೆ ಬಲು ಚೊಕ್ಕಟವಾಗಿಡುವ ಛಟಿ. ಆ ಕಾರಣದಿಂದಲೇ ರಂಗು ಮನೆ ಯಲ್ಲಿ ಸಿಗರೇಟೇ ಸೇದುತ್ತಿರಲಿಲ್ಲ. ಆಫೀಸು, ಕ್ಲಬ್ಬು, ಇತರರ ಮನೆ, ಹೀಗೆ ತನ್ನ ಸಿಗರೇಟ್ ಅಭ್ಯಾಸ ಮುಂದುವರೆಸಿದ್ದ. ಹೆಂಡತಿ ಬಲು ಜಾಣೆ. ಸಾಲಿಗೆ ಅವಳಿಗೆ ಬಲು ಹಠಿತ. ಸ್ವಲ್ಪಮಟ್ಟಿಗೆ ಧೈರ್ಯಶಾಲಿ, ಸಾಹಸಿ ಎಂದೆನಿಸಿ ಕೊಂಡಿದ್ದ ರಂಗು ತಾಯಿಯು ಕೂಡ ಸೊಸೆಯ ಗುರ್‌ಗುರ್‌ಗೆ ಬೆದರಿ, ಮಗಳ ಮನೆ, ಕಾಶಿ, ರಾಮೇಶ್ವರ ಸೋದರ ಅಳಿಯನ ಸೀಮಂತ, ಕಾವೇರಿ ಸಂಗಮ, ಹೀಗೆ ನೆಪ ಹೇಳಿಕೊಂಡು ವರುಷದಲ್ಲಿ ಮುನ್ನೂರು ಐವತ್ತು ದಿನಗಳನ್ನು ಮನೆ ಹೊರಗೆ ಕಾಲ ಹಾಕುತ್ತಿದ್ದರು. ಇನ್ನು ಹದಿನೈದು ದಿನ ಪಕ್ಷ ನಡೆಸಿದ ಹಾಗೆ ಮಗನ ಮನೆಯಲ್ಲಿ ಕಾಲುಹಾಕುತ್ತಿದ್ದರು. ಅಂತಹ ಚೂಟಿ ಹೆಂಡತಿ. ಬಂದ ಅತಿಥಿಯ ಮನಸ್ಸನ್ನು ಆ ಬೂದಿಯಿಂದಲೇ ಸಾರಿಸುವುದರಲ್ಲಿ ಎತ್ತಿದ ಕೈ.

ರಂಗು ಯೋಚನೆ ಮಾಡಿದ. ಏನಾದರೂ ಉಪಾಯಮಾಡಿ ಅವನು ಬರೋ ಹೊತ್ತಿಗೆ ಇವಳನ್ನು ಹದಿನೈದು ದಿನ ತೌರಿಗೆ ಕಳಿಸಿದರೆ ಎಲ್ಲರೂ ಸುಖ ವಾಗಿರಬಹುದು. ಅದಕ್ಕೇನಾದರೂ ಕಾರಣ ಹುಡುಕಲೇಬೇಕು. ಇವಳೂ ಒಪ್ಪುವ ಹಾಗೆ "ಪೂಸಿ" ಮಾಡಬೇಕು. ಸ್ನೇಹಿತನು ಬರುತ್ತಾನೆ ಅನ್ನೋ ಸುದ್ದಿ ಕೂಡ ಇವಳಿಗೆ ತಿಳಿಯಬಾರದು.

ಸ್ವಲ್ಪ ಹೊತ್ತು ಯೋಚಿಸಿದ ಮೇಲೆ ತಿಳಿಯಿತು. ಮನೆಗೆ ಹೋಗ್ತಾ ಒಂದು ಜತೆ ಸೀರೆ ತೊಗೊಂಡು ಹೋಗೋದು. ನಿಮ್ಮ ತಾಯಿ ಉದ್ಯಾಪನೆ ಮಾಡ್ತಾರಂತೆ; ಅವರಿಗೊಂದು ಸೀರೆ. ನೀನು ಹೋಗಿ ಕೊಟ್ಟು ದೇವರ ಅವರ ಆಶೀರ್ವಾದ ಪಡೆದು ತೌರುಗಾಣಿಕೊಂಡು ಬರೋದಕ್ಕೆ ನಿನಗೊಂದು ಸೀರೆ ಅಂತ ಹೇಳೋದು. ಅವರ ತಾಯಿ ಮುಕ್ಕಾಲುಪಾಲು ಉದ್ಯಾಪನೆ ಮಾಡಲೇ ಬೇಕು. ಏಕೆ ಎಂದರೆ ಇವಳಿಗೇ ನಲವತ್ತು ಪ್ರಾಯ. ಆ ಯೋಚನೆ ಇಲ್ಲ ದಿದ್ದರೂ ಇವಳು ಹೋದ ಮೇಲೆ ಸೀರೆ ಆಸೆಗಾದರೂ ಮಾಡಿಯೇ ಮಾಡುತ್ತಾರೆ.

ಅಂದ ಮೇಲೆ ಸ್ನೇಹಿತ ಬಂದಾಗ, ಇಬ್ಬರೂ ಮನೆಯಲ್ಲಿ ಮೊದಲು ಹಾಸ್ಟಲಿನಲ್ಲಿ ಇದ್ದಂತೆಯೇ ಇರಬಹುದು. ಅಂದುಕೊಂಡು ಸಮರವ್ಯೂಹ ರಚಿಸಿದ. ಕೂಡಲೇ ರಚಿಸಿದಮಾರ್ಗದಲ್ಲಿ ಕಾರ್ಯಗಮನಿಯಾದ.

ಮನೆಗೆ ಬಂದ. ರಂಗುವಿನ ಹೆಂಡತಿ ಎಲ್ಲೂ ಇಲ್ಲದ ಗೆಲುವು ಮುಖ ದಿಂದ ವರಾಂಡದಲ್ಲೇ ಎದುರುಗೊಂಡಳು. ಚಕ್ಕಂದ ಆಡುವ ರೀತಿಯಲ್ಲೇ ಒಳಕ್ಕೆ ಕರೆದುಕೊಂಡು ಹೋದಳು. ಕಾಫಿ ತಂದಿಟ್ಟಳು. ಬಿಸಿಬಿಸಿ ಬೋಂಡ ಎದುರಿಗಿಟ್ಟಳು. ನಲವತ್ತಾದರೂ ನಗುನಗುತ ನಿಂತಳು.

ರಂಗು ಸುಸ್ತು. ತಾನು "ಪೂಸಿ"ಮಾಡಬೇಕು ಅಂತ ಬಂದರೆ ಅವಳೇ ಪೂಸಿಗೆ ಶುರು ಹಚ್ಚಿದ್ದಾಳಲ್ಲ. ಇದರ ಮರ್ಮ ಏನಿರಬಹುದು. ದಿಟವಾಗಿಯೂ ತೌರಿಗೆ ಹೋಗಬೇಕು. ಅದಕ್ಕೆ ಸೀರೆ ಬೇಕು, ಖರ್ಚಿಗೆ ಬೇಕು ಎಂದು ಕೇಳಲು ಉಪಚಾರವೇ? ಎನ್ನಿಸಿತು. ಹೇಗಾದರೂ ಇರಲಿ, ನನ್ನ ಕಾರ್ಯಕ್ರಮ ಗೆದ್ದರೆ ಸಾಕು. ಈ ಸಮಯದಲ್ಲಿ ನನ್ನ ಇಸತ್ತು ಇರಬಾರದು ಎಂದು ಮೆಲ್ಲಗೆ ತಾನೇ ಶುರು ಮಾಡಬೇಕು ಅಂತಿದ್ದ.

ಅಷ್ಟರಲ್ಲೇ ರಂಗು ಹೆಂಡತಿ ಪಲುಕಿದಳು. "ಈ ತಿಂಗಳು ಒಂದೈವತ್ತು ರೂಪಾಯಿ ಬೇಕೂಂದ್ರೆ! ಚಿಲ್ಲರೆ ಪಲ್ಲರೆ ಸಾಮಾನಿಗೆ ಅಂತ.

"ಅದೇನು ಸಾಮಾನು ಹೇಳು. ಕಂಟ್ರೋಲ್ ದರದಲ್ಲಿ ನಾನೇ ತಂದು ಕೊಡ್ತೀನಿ."

"ಕಂಟ್ರೋಲ್ ಅಂಗಡಿಗಳಲ್ಲಿ ಸಿಗೋ ಸಾಮಾನಲ್ಲಾಂದ್ರೆ ಅದು. ಅಲ್ಲದೆ ಅವೆಲ್ಲಾ ಹೆಂಗಸರ ವ್ಯಾಪಾರದ್ದು. ಗಂಡಸರಿಗೇಕೆ, ಅಂತಹದುರ ದುಃಖ? ಹಾಗೆಲ್ಲಾ ಕೇಳಬಾರದು?

"ಆಗಲಿ ಬಿಡು ಅಷ್ಟು ಗೋಪ್ಯವಾದರೆ ಹಾಗೇ ಆಗಲಿ" ಎರಡು ನಿಮಿಷ ನಿವಾಳಿಸ್ಕು!

"ಅಹೇನೂ ಅಂದ್ರೆ ಒಂದು ಪ್ಯಾಕೆಟ್ ತಂದ ಹಾಗಿತ್ತಲ್ಲ! ಆಫೀಸ್ ಕಾಗದದ ತರಹ ಕಾಣಲಿಲ್ಲ. ಹೊಸಾ ಸೂಟೋ ಷರಟುಗಳೋ ಇರಬಹುದು ಅಂತೀನಿ" ಅಂದಳು.

"ತೆಗೆದು ನೋಡಬಾರದೆ" ತನ್ನ ಕಾರ್ಯಕ್ರಮವನ್ನು ರೂಪಿಗೆ ತರಲು ಅವಕಾಶ ಸಿಕ್ಕಿದ್ದಕ್ಕೆ ಸಂತಸಗೊಂಡು ರಂಗು ಅಂದ.

"ತೆಗೆದು ನೋಡಿ" ಚೆನ್ನಾಗಿದೆ ಅಂದ್ರೇ ಸೀರೆ! ಯಾರಿಗೆ? ಯಾತಕ್ಕೆ?

ಆಗ ರಂಗು ತನ್ನ ಎಂ. ಸಿ. ಎಸ್. ಬುದ್ಧಿಯನ್ನೆಲ್ಲಾ ಉಪಯೋಗಿಸಿ, ಎಲ್ಲವನ್ನು ವಿಶದೀಕರಿಸಿದ. ಜತೆಗೆ ಜೇಬಿನಿಂದ ಐವತ್ತು ರೂಪಾಯಿ ತೆಗೆದು ಲಂಚಾನೂ ಕೊಟ್ಟ..

ಹಾಗೇ ಆಗಲಿ ಅಂದ್ರೆ! ನೀವು ಹೇಳಿದ ಮೇಲೆ ಬೇಡ ಅಂತೀನೆಯೇ? ಎಂದಳು ರಂಗು ಹೆಂಡತಿ. ಕುರಿಯ ಹಾಗೆ ಎಲ್ಲಕ್ಕೂ ಒಪ್ಪಿಕೊಂಡಳು.

ಆಗಲೇ ರಂಗುವಿಗೆ ಮನಸ್ಸು ಹುಳ್ಳಿಂದಿತು. ಆದರೂ ತನಗೆ ಬೇಕಾದ್ದು ಆದಾಗ ಮಿಕ್ಕಿದ್ದಕ್ಕೆ ಏಕೆ ಯೋಚನೆ! ಸುಮ್ಮನಾದ.

ಶನಿವಾರ ದೆಹಲಿಯಿಂದ ಅವನ ಸ್ನೇಹಿತ ಬರಬೇಕು. ಗುರುವಾರ ಸಾಯಂಕಾಲ ಹೆಂಡತಿಯನ್ನು ಕೌರಿಗೆ ಉಪಾಯವಾಗಿ ರವಾನಿಸಿದ್ದಾನೆ. ರಾಜಕಾರಣಿಯಂತೆ ಕೆಲಸ ಮಾಡಿದೆ ಎಂದು ಹಿಗ್ಗುತ್ತಿದ್ದಾನೆ. ಶುಕ್ರವಾರ ಸಾಯಂಕಾಲ ಮನೆಗೆ ಬಂದಾಗ, ಮನೆ ಏನೋ ಬಿಕೋ ಅಂತಿದ್ದಂತೆ ಭಾಸ. ಆದರೇನು ನಾಳೆಯಿಂದ ಹತ್ತು ದಿನ ಹಿಂದಿನ ಹಾಸ್ಟಲ್ ಜೀವನ ನಡೆಸ ಬಹುದು. ಏನೂ ಕೆಲಸ ಇಲ್ಲ. ಸ್ಪರ್ಧಾ ಪರೀಕ್ಷೆಯಲ್ಲಿ ಪ್ಯಾಸಾದಾಗಲೇ ಓದುವುದನ್ನು ಬಿಟ್ಟಿದ್ದ ಅಂದರೆ ಪುಸ್ತಕಗಳನ್ನು---ವೃತ್ತಾಂತ ಪತ್ರಿಕೆಗಳು, ಇಸ್ಪೀಟಿನ ಪಾಠಗಳು ಇವು ಹೊರತಾಗಿ ಬೇರೇನೂ ಓದುವ ಹವ್ಯಾಸವೇ ಇತ್ತಿಲ್ಲ.

ಕೆಲಸವಿಲ್ಲದ ಸಿವಿಲ್ ಸರ್ವಿಸ್ಸಿನವ ಏನು ಮಾಡಬೇಕು?

ಹಳೇ ಕಾಗದ ಹುಡುಕಬೇಕು.

ಆಗಲೇ ಸೈತಾನನು ಇವನ ಮನಸ್ಸನ್ನು ಪ್ರವೇಶಿಸಿದ. ಕೆಲಸವಿಲ್ಲ ನೋಡಿ ಅದಕ್ಕೇ! ತನ್ನ ಹೆಂಡತಿಯ ಪೆಟ್ಟಿಗೆಯನ್ನು ಹುಡುಕತೊಡಗಿದ. ಹದಿನಾರು ಅಣಿಯಾಗಿ ಮಡಿಚಿಟ್ಟ ಸೀರೆಗಳ ಮಧ್ಯೆ ಒಂದು ಕಾಗದ ಇತ್ತು. ವಿಳಾಸ ಬರೆದಿದೆ, ಸ್ಟಾಂಪು ಹಚ್ಚಿದೆ. ಲಕೋಟೆ ಅಂಟಿಸಿದೆ. ಆದರೂ ಅಂಚೆಗೆ ಹಾಕಿಲ್ಲ. ಎಲ ಎಲಾ! ಅಷ್ಟು ಸೂಟಿಯ ಹೆಂಡತಿ. ಅಣಿ ಅಚ್ಚು ಕಟ್ಟು ಎಲ್ಲಾ! ಆಹರೆ ಕಾಗದ ಬರೆದು ಸಿದ್ಧವಾದಮೇಲೂ ಏಕೆ ಅಂಚೆಗೆ

ಹಾಕಿಲ್ಲ! ನೋಡೇಬಿಡೋಣ ಅಂತ ಹೊರಕ್ಕೆ ತೆಗೆದ. ಅದು ಅವನ ಅತ್ತಿಗೆ ಬರೆದ ಕಾಗದ. ಕಳ್ಳ ಮನಸ್ಸಿನಿಂದ ಒಡೆದ. ಬರೆದ ಪತ್ರ ಓದಿದ.

"ಮಾತೋಶ್ರೀಯವರ ಪಾದ ಪದ್ಮಂಗಳಲ್ಲಿ ಲಕ್ಕು ಮಾಡುವ ನಮಸ್ಕಾರಗಳು. ಇಲ್ಲಿ ಇವರೂ ಎಲ್ಲರೂ ಕ್ಷೇಮ. ನೀವೆಲ್ಲಾ ಕ್ಷೇಮವಾಗಿದ್ದೀರೆಂದು ಸೀನಿ ಬಂದಾಗ ಹೇಳಿದ್ದ. ಮೊನ್ನೆ ದೆಹಲಿಯಿಂದ ಸರೋಜಳ ಕಾಗದ ಬಂದಿತ್ತು. ಅವಳೂ ಊರಿಗೆ ಹತ್ತು ದಿನ ರಜಾಕ್ಕೆಂದು ಬರುತ್ತಾಳಂತೆ. ನನ್ನನ್ನೂ ಊರಿಗೆ ಬಾ ಅಂತ ಬರೆದಿದ್ದಾಳೆ. ಸರೋಜ ಬರುತ್ತಾಳೆ ನಾನು ಊರಿಗೆ ಹೋಗಬೇಕು ಅಂದರೆ ಇವರು ರೇಗಿ ಬೀಳೋದು ನಿನಗೆ ಗೊತ್ತೇ ಇದೆ. ಅದಕ್ಕೆ ಏನಾದರೂ ಉಪಾಯ್ಮ ಮಾಡಿ, ಯಾರಾದರೂ ಕಾಯಿಲೆ ಅಂತಾದರೂ ಬರೆದು ನನ್ನನ್ನು ಕರೆಸಿಕೋ. ಸರೋಜ ಬರೆದಿದ್ದಳು. ಅವಳೊಬ್ಬಳೇ ಬರುತ್ತಾಳೆ ಅಂತ. ಮಿಕ್ಕ ವಿಚಾರಕ್ಕೆ ನಿನ್ನ ಕಾಗದ ಬಂದ ಮೇಲೆ ಬರೆಯುತ್ತೇನೆ.

ಇಂತಿ ನಮಸ್ಕಾರಗಳು,

ಲಕ್ಕು.

ರಂಗುವಿಗೆ ಇಂಗು ತಿಂದಹಾಗಾಯ್ತು. ನಾನೇ ಬೇಕಾಗಿ ಅವಳ ಬಲೇಗೆ ಬಿದ್ದೆನಲ್ಲಾ ಅಂತ ದುಃಖ. ಆದರೂ ತನ್ನ ಸ್ನೇಹಿತ ಬಂದಾಗ ಅಂಕೆ ಶಿಕ್ಷೆ ಇಲ್ಲದೆ ಸುಖವಾಗಿರಬಹುದಲ್ಲಾ ಅಂತ ಖುಷಿ. ಅದಕ್ಕೇ ಮನುಷ್ಯ ಇಂಗು ತಿಂದಹಾಗಾಯ್ತು ಅಂದಿದ್ದು.

ಮಾರನೇ ದಿನ ಸ್ನೇಹಿತ ಬಂದ. ಸುಖವಾಗಿ ಹತ್ತು ದಿನಾನ ಹತ್ತು ನಿಮಿಷದ ಹಾಗೆ ಕಳೆದರು. ಮನೆಯಲ್ಲೆಲ್ಲೂ ಬೂದಿ ಬಿದ್ದರೂ ಕೇಳೋರೇ ಇಲ್ಲ. ಕಡೆಗೆ ರಾತ್ರಿ ರೈಲಿಗೆ ಹೊರಡಬೇಕು ಅನ್ನೋವಾಗ ರಂಗು ಅಂದ ಇನ್ನೊಂದು ದಿನ ಇದ್ದು ಹೋಗಬಾರದೆ ಅಂತ. ಆಗ ಅವನಂದ 'ಇಲ್ಲಾ ರಂಗು ಇವತ್ತು ಬೌರಿಂಗ್ ಪೇಟೇಲಿ ನನ್ನ ಸರೋಜ ತೌರೂರಿಂದ ಬಂದು ರೈಲಿನಲ್ಲಿ ನನ್ನ ಸೇರ್ತಾಳೆ. ಅದಕ್ಕೆ ಹೋಗಲೇಬೇಕು' ಎಂದು.

ಮಾರನೆ ದಿನ ಹಾಸಿಗೆ ಬಿಟ್ಟೆ ಏಳೋ ಹೊತ್ತಿಗೆ, ಮನೆಗೆ ಟ್ಯಾಕ್ಸಿಯಲ್ಲಿ ಯಾರೋ ಬಂದರು. ಬಾಗಿಲು ತೆಗೆದು ಹೊರಗೆ ಹೋಗಿ ನೋಡ್ತಾನೆ ಲಕ್ಕು ವಾಪಸ್ಸು ಬಂದಿದ್ದಾಳೆ. "ಕಾಗದ ಬರೆಯುವುದಕ್ಕೆ ಪುರಸತ್ತು ಆಗಲಿಲ್ಲ. ಉದ್ಯಾಪನೆ ಮುಗೀತು ಬಂದುಬಿಟ್ಟೆ" ಅಂತಾನೇ ಒಳಕ್ಕೆ ಬಂದೇಬಿಟ್ಟಳು.

ರಂಗೂಗೆ ಯೋಚನೆ. ಬರುಕ್ಕೆ ಮುಂಚೆ ಮನೇನ ಗುಡಿಸಿದ್ದರೆ ಮುಂದಾಗುವ ಗೋಳೇ ತಪ್ಪುತ್ತಿತ್ತಲ್ಲ! ಅಂತ.

— ಪ್ರಸಾದ್.

# ಉಚಿತ ವಿನೋದ

ರೈಲ್ವೆ ನಿಲ್ದಾಣವಾದರೂ, ದಿನವೂ ನಾಲ್ಕು ಬಾರಿ ಮನರಂಜನೆ ಕಾರ್ಯಕ್ರಮ ಬಹಳ ವಿಜೃಂಭಣೆಯಿಂದ ನಡೆಯುತ್ತದೆ....ಪ್ಲಾಟ್‌ಫಾರಂ ಟಿಕೇಟ್‌ಗೆ ಎರಡಾಣೆ ವೆಚ್ಚ ಅಷ್ಟೆ.

ನನ್ನ ಗೆಳೆಯನ ಸಲಹೆ ಮೇರೆ, ನಾನು ಮೊನ್ನೆ ಹೋಗಿದ್ದೆ. ೩-೩೫ಕ್ಕೆ ಗಾಡಿ ಹೊರಡುತ್ತೆ; ಮನರಂಜನೆ ೩-೨೫ ಪ್ರಾರಂಭ ಎಂದು ಅವನು ಹೇಳಿದ್ದ. ನಾನು ಬೇಕ್ಕನೆ ಬಾಗಿಲು ದಾಟಿ ಒಳಕ್ಕೆ ಹೋದೆ. ಗೆಳೆಯ ಅಲ್ಲೇ ಕಂಬ ಕ್ಕೊರಗಿ ನಗುತ್ತಲೇ ಇದ್ದ.

"ನೋಡು! ನೂರಾರು ಸಂಸಾರಗಳೂ ಒಂಟಿ ಪ್ರಯಾಣಿಕರೂ ಗಂಟು, ಮೂಟೆ, ಟಿನ್, ಟ್ರಂಕು, ಗೂಡೆ ಇತ್ಯಾದಿ ಎಲ್ಲ ಆಗಲೇ ಬಂದು ಹರಡಿ ಕೊಂಡಿವೆ. ಎಲ್ಲರೂ, ಕತ್ತು ಕೊಂಕಿಸಿ, ಡಬ್ಬಿಗಳ ಸಾಲು ಪ್ಲಾಟ್‌ಫಾರಮಿಗೆ ಬರುವುದನ್ನೇ ವೀಕ್ಷಿಸುತ್ತಿದ್ದಾರೆ ...ಅಕೊ! ಲಗ್ಗೇಜ್ ಸಾಮಾನು ತುಂಬಿದ ಕೈಗಾಡಿಯವನು ಈ ಜನಸಂದಣಿಯನ್ನು ಭೇದಿಸಿಕೊಂಡು ಹಾಡುತ್ತ ಬರ್ತಿ ದಾನೆ, ನೋಡು. ಹೆಂಗಸರೂ ಮಕ್ಕಳೂ ಹೇಗೆ ಹೆದರಿ ಚೀರಿ ಎದ್ದು ಬಿದ್ದು ಇಬ್ಬಾಗವಾಗುತ್ತಿದಾರೆ....ತೆಪ್ಪಗಿದ್ದವರ ಮೇಲೆ ತೆಪ್ಪೋತ್ಸವ! ಎಷ್ಟು ಜನರ ಶಾಪ, ಕೆಂಗಣ್ಣು ಆ ಗಾಡಿಯನ್ನು ಹಿಂಬಾಲಿಸುತ್ತಿವೆ! ಅದರ ಕಟಕಟ ಶಬ್ದ ಎಷ್ಟು ಕರ್ಕಶವಾಗಿದೆ .. ಇದು ಮೊದಲನೆ ದೃಶ್ಯ" ಎಂದ, ಅವನು.

ನಂತರ, ಆ ಜನ ಸಮೂಹವನ್ನು ಮತ್ತಷ್ಟು ಹೆದರಿಸಲು ರೈಲಿನವರು ಆಗಾಗ ಎಂಜನ್‌ಗಳ ಗಂಟಲನ್ನೊತ್ತಿ ಕೂಗಿಸುವರು. ಆಗ, ಹಲವಾರು ಜನ ಎದ್ದು, ಕೈಯಲ್ಲಿ ಟ್ರಂಕುಗಳನ್ನೆತ್ತಿ ಹಿಡಿದು, ಮಕ್ಕಳನ್ನು ಹೊಡೆದೆಳೆದು, ಸಿದ್ಧರಾಗುವರು. ನಿರಾಶರಾಗಿ ಮತ್ತೆ ಗೊಣಗುತ್ತ ಕೂರುವನು.

ಹತ್ತೆಂಟುಸಲ ಹೀಗೆ ಅವರನ್ನು ಕಾಡಿಸಿದ ಮೇಲೆ, ಯಾವನೋ ಒಬ್ಬ ಪುಣ್ಯಾತ್ಮ, "ಸಾಕು! ಇನ್ನು ಇವರು ಹತ್ತಿ ಹೊರಡಬೇಕಾದ ಟ್ರೈನನ್ನು ತಂದೇ ತರೋಣ" ಎಂದು ಮತ್ತೊಬ್ಬನಿಗೆ ಸೂಚನೆ ಕೊಟ್ಟ. ಆಗ, ಗಂಟೆ ೩-೩೦. ಆತ, ತೂಕಡಿಕೆಯಿಂದೆದ್ದು, "ಇನ್ನೂ ಕೊಂಚ ತಡಮಾಡಿ ತಂದರೆ, ತಮಾಷೆ ಹೆಚ್ಚಲ್ಲವೆ" ಎಂದು ಸೂಚಿಸಿದ. "ಇಲ್ಲ, ಇಲ್ಲ, ಪಾಪ, ಪಾಪ" ಎಂಬ ಉತ್ತರ ಕೇಳಿ, ಆತ ಷೆಡ್ಡಿಂದ ಡಬ್ಬಿಗಳ ಸಾಲನ್ನು ತರಲು ಹೊರಟೇ ಬಿಟ್ಟ.

ಅಷ್ಟು ಹೊತ್ತಿಗೆ, ಪ್ಲಾಟ್‌ಫಾರಂ ತುಂಬ, ತುದಿಯಿಂದ ತುದಿವರೆಗೆ, ಕಾದು ಕಾದು ಕಾಲು ಸೋತು, ನಿಂತು ನಿಂತು ನಿಲುವು ಕೆಟ್ಟ, ಜನಸ್ತೋಮ. ಹಿಮ್ಮುಖವಾಗಿ ಗಾಡಿಗಳ ಸಾಲು ಸ್ಟೇಷನಿಗೆ ಬಂತು.

"ಈಗ ನೋಡು ಉತ್ತಮೋತ್ತಮ ವಿನೋದ...." ಎಂದ ಗೆಳೆಯ.

ಆಹ! ಅದನೇನೆಂಬೆ. ನಿಜಕ್ಕೂ ಸ್ಟೇಷನ್ ಅಧಿಕಾರಿಗಳ ಭುಜವನ್ನು ನಾವು ತಟ್ಟಬೇಕಾದದ್ದೆ. ಕಿಟಕಿಗಳ ಮೂಲಕ, ಬಾಗಿಲು ಸಂದಿನಿಂದ, ಮಕ್ಕಳು ಮರಿ ಹಾಸಿಗೆ ಹೋಲ್ಡಾಲು, ಪೋರ್ಟರುಗಳು, ಕೋಳಿಮರಿ, ಕಳ್ಳ ಚೀಲ, ಎಲ್ಲವೂ ಏಕ ಕಾಲದಲ್ಲಿ ತೂರಿ ಹಾರಿ ನುಸುಳಿ ನುಗ್ಗಿ ಕೈಕಾಲು ಮುರಿದು ಗೋಳೋ ಅಂತ ಅಳುತ್ತಾ ಅಟ್ಟಹಾಸ ಮಾಡುತ್ತಿದ್ಧರು.

ಎಂಟುನೂರು ಜನ ಒಟ್ಟಿಗೆ ಒಂದೇ ನಿಮಿಷದಲ್ಲಿ ಒಂದು ರೈಲನ್ನು ಹತ್ತುವುದು ನಿಜಕ್ಕೂ ಮನರಂಜಕ. ಇಂಥದ್ದನ್ನು ದಿನವೂ ಎರಡು ಬಾರಿ ಏರ್ಪಾಟುಮಾಡಿ ನನ್ನಂಥವರ ಮನಕ್ಕೆ ಆಹ್ಲಾದವನ್ನುಂಟುಮಾಡುತ್ತಿರುವುದಕ್ಕಾಗಿ ಎಲ್ಲರನ್ನೂ ವಂದಿಸಿ ನಾನು ಹಿಂತಿರುಗಿದೆ.

—ರೇವಣ್ಣ.




ಹಳ್ಯಾಳಿ :—ಏನು ರಾಯರೇ ಚುನಾವಣೇ ಲೀಸ್ಟಿನಲ್ಲಿ ನಿಮ್ಮ ಹೆಸರೇ ಇಲ್ಲ. ಆದರೂ ನಗ್ತಾ ಇದೀರಿ !

ಅವ :—ಅದಕ್ಕೆ ಸಾಹುಕಾರೇ ! ನಗ್ತಾ ಇರೋದು. ನಿಂತು-ಬೀಳೋಕ್ಕಿಂತ ಈಗಲೇ ಕೂತಾಗಲೇ ಬೀಳೋದೇ ಲೇಸು ಅಲ್ಲವೇ-ಸಹಜಿನಲ್ಲಿ.

# ಮಹಾವ್ಯಕ್ತಿ

ನನ್ನ ಗುರುದೇವನೇ ನರಶ್ರೇಷ್ಠ, ಬೇರೊಬ್ಬರಿಲ್ಲ. ಹಿಂದೆ ಇತ್ತಿಲ್ಲ; ಮುಂದೆ ಇರುವುದಿಲ್ಲ.

"ಬೆಳೆ ಮೊಳಕೆಯಲ್ಲಿ" ಎಂಬ ಮಾತು ಅಕ್ಷರಶಃ ನಿಜ. ಕಪ್ಪಗಿದ್ದ ಜವಾನ ಎತ್ತಿಕೊಳ್ಳಹೋದರೆ, "ಥೂ, ನೀನು ರಾಗಿ ತಿಂತಿ. ನಿನ್ನಾಗೆ ನನ್ನ ಮೈ ಕಪ್ಪಾಗುತ್ತೆ ನೀಮುಟ್ಟಬೇಡ" ಅಂತ ಅಂದಿದ್ದ ಅವರ ಮುದ್ದು ಮಾತನ್ನ ಅವರ ತಾಯಿ ಈಗ್ಲೂ ಹೇಳುತ್ತಾರೆ. ಚೆನ್ನಾಗಿ ದೇಹದ ಬೆಳವಣಿಗೆ ಇಲ್ಲದ ಅವರ ಬಾಲ್ಯದಲ್ಲಿ, ಅವರ ಮಾತನ್ನು ಕೇಳಿ ಬೆರಗಾದವರೆಷ್ಟೋ! ಹುಡುಗರಾಗಿದ್ದಾಗ, ಶ್ರೀ....... ರು ಮೂರು ಅಂಗುಲ ದಪ್ಪದ ಕಬ್ಬಿಣದ ಕಂಬಿಯನ್ನು ಬಗ್ಗಿಸಿದ್ದನ್ನ ನೋಡಿ, ಮನೆಯಲ್ಲಿ ಸೌಟನ್ನು ಸೊಟ್ಟಮಾಡಿ ಗುರುದೇವನು ತಾಯಿಯಿಂದ ಬೈಸಿಕೊಂಡರಂತೆ.

ಎಷ್ಟು ಶ್ರಮವನ್ನು ಬೇಕಾದರೂ ಸಹಿಸುವ ದೇಹ ಅಕ್ಬರಿಗಿತ್ತಂತೆ. ಅಂದರೆ ಅಕ್ಬರನು ಹೆಚ್ಚು ಎತ್ತರದ ಆಳಲ್ಲ, ಹೆಚ್ಚು ದಪ್ಪವೂ ಅಲ್ಲ. ನನ್ನ ಗುರುದೇವನ ಕಾಯವೂ ಹಾಗೆ— ಸ್ಥೂಲವೂ ಅಲ್ಲ, ಎಳೆ ನಿಂಬೇಕಾಯೂ ಅಲ್ಲ. ಇನ್ನು ಬಣ್ಣ ಆಂಗ್ಲರಂತೆ ಕೆಂಪೂ, ನಿಗ್ರೋವಿನಂತೆ ಕಪ್ಪೂ, ಜೀಣೀಯರಂತೆ ಹಳದಿಯೂ ಅಲ್ಲ. ಎಲ್ಲಾ ಸಮಿಶ್ರ ಬಣ್ಣ. ಸ್ವಲ್ಪ ದೃಷ್ಟಿ ಮಂದದಿಂದ ಕನ್ನಡಕ, ಪಯೋರಿಯಾ ಪೀಡನೆಯಿಂದ ಹಲ್ಲುಗಳನ್ನು ಕೀಳಿಸಿ, ಕೃತಕ ದಂತ ಪಂಕ್ತಿಗಳನ್ನು ಧರಿಸಿರುವ ಅವರು ಐವತ್ತಕ್ಕೆ ಹತ್ತಿದರೂ ಇಪ್ಪತ್ತರ ತರುಣನಾಗ ಬಲ್ಲರು! G. B ಷಾರವರು ಗಡ್ಡ ಬಿಡಲು ಕಾರಣ, ಅವರ ಚಿಕ್ಕ ವಯಸ್ಸಿನಲ್ಲಿ ಸಿಡುಬೆದ್ದು, ಅದರ ಕಲೆಗಳು ಮುಚ್ಚಲೆಂದು ನನ್ನ ಗುರುವಿಗೂ ಸಿಡುಬೆದ್ದು, ಮುಖದ ಮೇಲೆ ಅಲ್ಲೊಂದು ಇಲ್ಲೊಂದು ಕಲೆಗಳು ಕಂಡರೂ ಕಾಣದ ಹಾಗಿವೆ. ಆದರೆ ಅವರು ಹೇಡಿ ಷಾನಂತೆ ಗಡ್ಡಬಿಟ್ಟಿಲ್ಲ. ಅವರ ಫೋಟೋ ನೋಡಿ ತಿಳಿಯುತ್ತೆ! ಅಷ್ಟೇ ಅಲ್ಲ. ಪ್ಲೇಗೂ ಕೂಡ ಬಂದು ಬದುಕಿರುವ ಧೀರ ನನ್ನ ಗುರು!!

ಮಹಾ ವ್ಯಕ್ತಿಗಳನೇಕರು ಆಹಾರ ನಿದ್ರೆಗಳಿಲ್ಲದೆ ಹಿಡಿದ ಕೆಲಸದಲ್ಲಿ ಮಗ್ನರಾಗಿರುತ್ತಾರಂತೆ ನನ್ನವರೂ ಹಾಗೆ. ಇಸ್ಪೇಟಿಗೆ ಕೂತರಾಯಿತು, ಯಾವು .ದಕ್ಕೂ ಎದ್ದೇಳದೆ, ಅದರಲ್ಲೇ ಮಗ್ನರಾಗಿರುತ್ತಾರೆ. ವ್ಯಕ್ತಿ ಶ್ರೇಷ್ಠರು ಹಿಡಿದ

ಹಠವನ್ನು ಬಿಡುವುದಿಲ್ಲವೆನ್ನುವುದಕ್ಕೆ ಬೇರೆ ಉದಾಹರಣೆ ಬೇಡ; ಅತ್ತೆ ಸೊಸೆ ಜಗಳದಿಂದ ಕುಪಿತರಾಗಿ, ಮಡದಿ ಮನೆಗೆ ಬಂದ ಮರುಕ್ಷಣದಲ್ಲಿ ಅವಳಿಗೆ ಒಡವೆ ಸೀರೆಗಳನ್ನು ತೆಗೆದು ಕೊಡುವುದಿಲ್ಲವೆಂದ ಮಾತನ್ನು ಇನ್ನೂ ಮೀರಿಲ್ಲ ಗುರುದೇವ.

ಹೆಸರಾಂತ ದಂಡನಾಯಕ ಜಿ........ಷೈಕ್ ರಾತ್ರಿ ನಿದ್ರೆಯಲ್ಲಿದ್ದು ತನ್ನ ಮುಂದಿನ ಹಂಚಿಕೆಯನ್ನು ಅರನಿದ್ರೆಯಲ್ಲೇ ಬರೆದು ಮಲಗಿಬಿಡುತ್ತಿದ್ದನಂತೆ. ಅವನಿಗೆ ಅನುಕೂಲಿಸುವಂತೆ ಅದನ್ನರಿತ ಅವನ ತಂಗಿ ಅವನ ಹಾಸಿಗೆ ಬಳಿ ಯಾವಾಗಲೂ ಬರೆಯುವ ಸಾಮಗ್ರಿಗಳನ್ನು ಸಿದ್ಧಮಾಡಿಟ್ಟಿರುತ್ತಿದ್ದಳಂತೆ. ನನ್ನ ಗುರುಪತ್ನಿ ಆ ದಂಡನಾಯಕನ ಅರ್ಧಾಂಗಿಯಷ್ಟು ಚತುರಳಲ್ಲ. ಆದ್ದರಿಂದ ಬೇಕಾದ ಸಿದ್ಧತೆಯನ್ನು ತಾನೇ ಮಾಡಿಕೊಂಡು, ಮಡದಿ ಮಕ್ಕಳು ಮಲಗಿದ ಮೇಲೆ ಮಧ್ಯರಾತ್ರಿಯಲ್ಲಿ ಮಾಡಬೇಕಾದ್ದನ್ನು ಮಾಡುತ್ತಾರೆ ಗುರುದೇವ.

ಗಾಂಧಿಜೀ (ಮಹಾತ್ಮಾ ಎಂಬುದನ್ನು ಏಕೆ ಬಿಟ್ಟಿರುವೆನೆಂಬುದು ಇಷ್ಟು ಹೊತ್ತಿಗೆ ನಿಮಗೆ ಅರ್ಥವಾಗಿರಬಹುದು) ಅವರು ಸ್ನಾನಕ್ಕೆ ಇಳಿದಾಗ ಹೆಚ್ಚು ಹೊತ್ತು ತೆಗೆದುಕೊಳ್ಳುತ್ತಿದ್ದರಂತೆ. ನನ್ನ ಗುರುದೇವ ಸ್ನಾನಕ್ಕಿಳಿದರೆ ಹೇಳಬೇಕಾದ್ದೇ ಇಲ್ಲ. ಸುಖೋಷ್ಣ ನೀರಿದ್ದರೆ ಎಷ್ಟು ಹಂಡೆ ನೀರನ್ನಾದರೂ ಅವರು ಬರಿದು ಮಾಡಿಬಿಡುತ್ತಾರೆ.

ನರಶ್ರೇಷ್ಠರೆಂದು ಹಿಂದೆಯೂ, ಇತ್ತೀಚೆಗೂ ಖ್ಯಾತಿಗೊಂಡ ಚಕ್ರವರ್ತಿ, ರಾಜಕಾರಣಪಟು, ಸೈನ್ಯಾಧಿಪತಿ, ಸಮಾಜ ಸುಧಾರಕ, ಸಾಹಿತಿಗಳ ಪೈಕಿ, ಉದಾಹರಣೆಗಾಗಿ ಕೇವಲ ಒಬ್ಬೊಬ್ಬರನ್ನು ಮಾತ್ರ ಆರಿಸಿಕೊಂಡು, ಅವರೆಲ್ಲರಿಗೂ ನನ್ನ ಗುರುದೇವನು ಮೀರಿದವರೆಂದು ತೋರಿಸಿದ್ದೇನೆ. ಹೆಚ್ಚೇನು? ಅವರೇ ನರಶ್ರೇಷ್ಠರಲ್ಲಿ ಶ್ರೇಷ್ಠ!! ಮಹಾತ್ಮರಲ್ಲಿ ಮಹಾತ್ಮ!!! ಲೋಕಕಂಟಕಕ್ಕೂ, ಲೋಕೋದ್ಧಾರಕಕ್ಕೂ ಆಗಿಂದಾಗ್ಯೆ ಅವತರಿಸುತ್ತೇನೆಂದು ಅಭಯ ಕೊಡುತ್ತಾರೆ---ನಿರ್ಭಯದಿಂದಿರಿ!

ನನ್ನ ಗುರುದೇವನು ಕಡಿದಿದ್ದೇನೆಂದು ವಾಚಕರು ಕುತೂಹಲ ಪಡಬಹುದು. ಮಿಕ್ಕ ಮಹಾತ್ಮರು, ಮಹಾವ್ಯಕ್ತಿಗಳು ಒಬ್ಬೊಬ್ಬರು ಒಂದೊಂದು ಕ್ಷೇತ್ರದಲ್ಲಿ ಮಾತ್ರ ನಿಸ್ಸೀಮರೆನಿಸಿಕೊಂಡಿದ್ದಾರೆ. ಆದರೆ ನಾನು ಬೇಕಾದ್ದು ಸಾಧಿಸಬಲ್ಲೆ!

ಏನು? ನಾನು ಎಂದು ಹೇಳಿಯೇಬಿಟ್ಟೆನೇ! ಸರಿ, ನನಗೆ ನಾನೇ ಗುರು! ಆದ್ದರಿಂದ ನಾನು ಮೊದಲೇ ಹೇಳಿದಂತೆ ನನ್ನ ಸಮಾನ ಶ್ರೇಷ್ಠ ವ್ಯಕ್ತಿ ಹಿಂದೆ ಇತ್ತಿಲ್ಲ; ಈಗ ಇಲ್ಲ, ಮುಂದೆ ಇರುವುದಿಲ್ಲ.

—ಹೇಮು.



# ಮಂಜು

ಶಿವಪಾರ್ವತಿಯರು ಕೈಲಾಸದಲಿ
ಸುಖವಾಗಿದ್ದರು ಸರಸದಲಿ.
ಷಣ್ಮುಖ ಗಣಪರು ಮನೆಯೊಳು ಆಡಿ
ಸ್ಕೂಲಿಗೆ ಹೋಗುತಲಿದ್ದರು ಕೂಡಿ.
ಪಾರ್ವತಿ ಬಡಿಸಿದ ಕವಳವ ಹೊಡೆದು
ತೇಗುತ ನಂದಿಯ ನೇರುತ ನಡೆದು
ಶಿವ ಆಫೀಸಿಗೆ ಹೋಗುವನು
ಟಪಾಲು ಗಿಪಾಲು ನೋಡುವನು
ಎಲ್ಲಾ ದಿಕ್ಪಾಲರ ಊರ್ಗಳಿಗೆ
ಕಾಗದ ಬರೆವನು ಮರುಗಳಿಗೆ.
ಈ ತೆರ ಲೋಕದ ಕ್ಷೇಮವ ನೋಡಿ
ಬದುಕಿದ್ದನು ಶಿವ ಗಿರಿಜೆಯ ಕೂಡಿ.

* * *

ಒರ್ದಿನ ಶಿವ ಊಟಕೆ ಕುಳಿತಿದ್ದ
ಸರಸಕೆ ಪಾರ್ವತಿಗಿಂತೆಂದ.
"ಏತಕೆ ಈ ಪಲ್ಯವು ಚೆನ್ನಾಗಿಲ್ಲ
ಸಾರಿನೊಳಿನಿತೂ ಉಪ್ಪೇ ಇಲ್ಲ
ವಯಸಾಗುತ ಮರೆವಾಯಿತೆ ನಿನಗೆ
ಅರುಳು ಮರುಳು ಆವರಿಸಿತೆ ನಿನಗೆ?"—

ಈಶ್ವರನೆಂದೀ ಮಾತನು ಕೇಳಿ
ಹುಬ್ಬನು ಗಂಟಿಕ್ಕಿದಳಾಗೌರಿ.
"ನೀವು ಗಂಡಸರು ನಿಮಗರಿವಹುದೆ?
ನಾನಂತೂ ದಿನದಿನವೂ ಬೆಂದೆ.
ಒಂದು ದಿನ ನೀವಡಿಗೆಯ ಮಾಡಿ

ನನ್ನ ಪಾಡು ನಿಮಗರಿವುದು ನೋಡಿ"
ಎನ್ನಲು ಗಿರಿಜೆಯು, ನಕ್ಕನು ಶಿವನು
ಅಡಿಗೆಯ ಮಾಳ್ಪುದು ಕಷ್ಟವದೇನು
ಬರಿಸುಳ್ಳನೆ ಕೊಚ್ಚುವೆ, ನಾಬಲ್ಲೆ.
ಅಡಿಗೆಯ ಗುಟ್ಟನು ನಾನೂ ಬಲ್ಲೆ."—

"ಓಹೋ ಅಂತಾಯಿತೆ ಅಡಿಗೆ
ಸುಲಭವೆ? ನೋಡಿರಿ ಎಂದಳು ಗಿರಿಜೆ.
ಹಾಗಾದರೆ ನಾಳೆಯ ದಿನವೊಪ್ಪತ್ತು
ಅಡಿಗೆಯ ಮಾಡಿರಿ ನೋಡುವೆ ನಿಂತು.
ನಿಮ್ಮಾಫೀಸಿಗೆ ರಜೆ ಬರೆದಿಟ್ಟು
ಮಾಡಿರಿ ಅಡಿಗೆಯ, ನೋಡುವೆ ಗುಟ್ಟು."

ಅಂತಾಗಲಿ ಎಂದೊಪ್ಪಿದ ಶಿವನು
ಅವನೆದೆ ತುಡಿಯಿತು ಭೀತಿಯನು.

* * *

ಇರುಳುರುಳಿತು ಬೆಳಗಾಯಿತು ಹಗಲು
ಎದ್ದ ಮೇಲೆ ಶಿವಗಾಯಿತು ದಿಗಿಲು.
ಯೋಚನೆಯಿಲ್ಲದೆ ಮಲಗಿರೆ ಗೌರಿ,
ಇಂದಲ್ಲವೆ ತನ್ನಡಿಗೆಯ ಸರದಿ
ಇಂತೇ ಮಲಗಿರಲೀ ಪಾರ್ವತಿಗೆ
ಕಾಫಿಯ ಕಾಯಿಸಿ ತರುವೆನು ಬಳಿಗೆ
ಎನ್ನುತ ಶಿವನಡೆದನು ಅಡಿಗೆಯ ಮನೆಗೆ
ಕೈಸುತ್ತಿದ ಹಾವ್ಗಳ ಕಿತ್ತೆಸದು ಆ ಕಡೆಗೆ
ಸೌದೆಯ ತಂದಿಟ್ಟನು ಒಲೆಯೊಳಗೆ
ಹಣೆ ಗಣ್ಣಿನ ಕಿಡಿ ದೋರಿದನದಕೆ
ಏನಾದರು ಒಲೆ ಹೊತ್ತಲೆ ಇಲ್ಲ
ಹಸಿ ಸೌದೆಯು ಬುಸುಗುಟ್ಟಿದುವೆಲ್ಲ.
ಹಿಂದಾ ತ್ರಿಪುರವ ದಹಿಸಿದ ಹಣೆಗಣ್ಣು
ಕುಸುಮಾಸ್ತ್ರನ ಉರಿಸಿದ ಆ ಬಿರುಗಣ್ಣು
ಸೌದೆಯ ನಿನಿತೂ ಹತ್ತಿಸಲಿಲ್ಲ.
ಬೆರಗಾದನು ಶಿವ; ಕಡಿದನು ಹಲ್ಲ!

ತ್ರಿಶೂಲದಿಂದಾ ಸೌದೆಯ ಸೀಳಿ
ಒಲೆಯೊಳಗಿಟ್ಟನು ಮಂತ್ರವ ಹೇಳಿ
ತಲೆ ಬಾಗಿಸಿ ಒಲೆಯೂದುತಲಿರಲು
ಜಟೆಯ ಗಂಗೆ ಹಸಿಸೌದೆಕೆ ಜಿನುಗಲು
ಒಲೆ ಹೊತ್ತದೆ ಹೊಗೆ ಮುಸುಕಿತು ಅಲ್ಲಿ.
ಮೂರು ಕಣ್ಣಲೂ ನೀರುಕ್ಕಿತು ಅಲ್ಲಿ.

ಶಿವನೀಪರಿ ಒಲೆ ಹೊತ್ತಿಸುತಿರಲು
ಹೊಗೆ ಹೆಚ್ಚೇರಿತು ಬೆಳ್ಮೋಡದವೊಲು.
ಶಿವನಡಿಗೆಯ ಮನೆಯದು ಆ ಹೊಗೆ
ಮೇಲೇರುವ ಬದಲಿಳಿಯಿತು ಧರೆಗೆ
ಲೋಕವ ತುಂಬುತ ಹಬ್ಬಿತೆಲ್ಲ ಕಡೆ
ಊರಿಗೆ ಕಾಡಿಗೆ ಗಿರಿಗಳ ಮೇಲ್ಗಡೆ.
ಜನರದನೇ ಕರೆಪರು ಮಂಜು
ಥರಗುಟ್ಟಿಸುವುದು ಮಾಗಿಯ ಮಂಜು.

—ದಿಬ್ಬಯ್ಯ.



ಆತ :—ಹಳೇ ಕಾಲದ ಮನೆ ಆದರೂ ಥಡೂತಿ ಮರದ ಸಾಮಾನುಹಾಕಿದ್ದಾರೆಕಣೇ!
ಆಕೆ :—ಥಡೂತಿ ಹೊಸಲೆಡವುತ್ತಾ, ಹೌದಯ್ಯೋ!......ಂದ್ರೇ!!

# ಕಟ್ಟಿಗೆಯವನೂ, ಅವನ ಬಡತನವೂ....

ಒಂದೂರು; ಊರಿನಲ್ಲಿ ಒಬ್ಬ. ಕಾಡಿಗೆ ಹೋಗಿ ಕಟ್ಟಿಗೆ ಒಡಿಯೋದು ಅದನ್ನು ಹೊತ್ತುಕೊಂಡು ಬಂದು ಮಾರೋದು, ಇದೇ ಅವನ ಸಂಪಾದನೆ, ಜೀವನಕ್ಕೆ ಮಾರ್ಗ. ಹೇಗಾದರೂ ಮಾಡಿ ಹಣ ಸಂಪಾದಿಸಬೇಕು, ಬಡತನ ಹೋಗಲಾಡಿಸಿಕೊಳ್ಳಬೇಕು ಅಂತ ಆಸೆ....ಬುದ್ಧಿ ತಲೆಯ ತುಂಬಾ ತುಂಬಿದ್ದರೂ ಫಲಕಾರಿಯಾಗಿರಲಿಲ್ಲ ಎಲ್ಲಕ್ಕೂ ಸಮಯ ಬರಬೇಕಲ್ಲ. ಅದೂ ಬಂತು. ಒಂದು ದಿನ........

ಕಾಡಿಗೆ ಎಂದಿನಂತೆ ಹೋದ: ದೊಡ್ಡ ಮಾವಿನ ಮರ. ಕಾಯಿತುಂಬಾ, ಬಾಯಲ್ಲಿ ನೀರೂರಿತು ಮೇಲೆ ಹತ್ತಿದ ಹುಷಾರಾಗಿ. ಕೆಳಗಡೆ ದೊಡ್ಡ ಭಾವಿ, ಜಾರಿ ಬಿದ್ದರೆ, ಅಂತ ಹೆದರಿಕೆ. ದೊಡ್ಡದೊಂದು ಕಾಯಿ ಕೈಗೆ ನಿಲುಕದೆ ಆಟವಾಡಿಸುತಿತ್ತು. ಮತ್ತೆ ಕೈಚಾಚಿದ....ಕೊಂಕುಳಲ್ಲಿದ್ದ ಕೊಡಲಿ ಜಾರಿ ಭಾವಿಯಲ್ಲಿ ಬಿದ್ದುಹೋಯಿತು. ಭಾವಿಗೆ ಧುಮುಕಬೇಕು ಮುಳುಗಿ ಎತ್ತಬೇಕು, ಅಷ್ಟರಲ್ಲಿ ಏನೋ ಹೊಳೆಯಿತು. ಕೆಳಗಿಳಿದು ಬಂದು ಅಳುತ್ತಾ ಕೂತ.

ಶಿವ ಪಾರ್ವತಿಯರು ಮೇಲೆ, ಆಕಾಶದಲ್ಲಿ ಹೋಗುತ್ತಿದ್ದರು. ಪಾಪ, ಏಕೋ ಏನೋ ಅಳುತ್ತಾನೆ ಅಂತ ಇಳಿದು ಬಂದರು.

"ಏನಪ್ಪಾ, ಯಾಕೆ ಅಳುತ್ತೀಯಾ ?" "ಕೊಡಲಿ ಬಿದ್ದುಹೋಯಿತು... "

ಶಿವ, ನೋಡೋಣ, ಇವನು ಸುಳ್ಳು ಹೇಳುತ್ತಾನೆಯೊ ಇಲ್ಲವೊ ಅಂತ; "ನಾನು ಮುಳುಗಿ ತಂದುಕೊಡುತ್ತೇನೆ. ಅಳಬೇಡ. ಹೀಗೇಅಳುತ್ತಾ ಇದ್ದರೆ ಭಾವಿ ಆಳ ಜಾಸ್ತಿಯಾಗುತ್ತೆ." ಅಂತ ಅಂದು ನೀರಿನಲ್ಲಿ ಮುಳುಗಿ ಒಂದು ಚಿನ್ನದ ಕೊಡಲಿ ತಂದು "ಇದು ನಿನ್ನದಾ ಅಪ್ಪಾ? ..." "ಅಲ್ಲ...." ಅಂದ ನಮ್ಮ ಕಟ್ಟಿಗೆಯವ ಶಿವ ಅದನ್ನು ಭಾವಿಗೆ ಹಾಕಿ ಮತ್ತೆ ಮುಳುಗಿ ಮೇಲೆದ್ದು ಬೆಳ್ಳಿಯ ಕೊಡಲಿ ತೆಗೆದು ತೋರಿಸಿದ. "ಇದೂ ನನ್ನದಲ್ಲ...."

ಅದನ್ನೂ ನೀರಿಗೆ ಹಾಕಿ ಮತ್ತೆ ಕಬ್ಬಿಣದ ಕೊಡಲಿ ತೆಗೆದು ತೋರಿಸಿದ "ಇದು ನನ್ನದೇ...." ಎಂದು ಹೇಳುತ್ತಾ ಕಟ್ಟಿಗೆಯವನು ಭಾವಿಗೆ ಹಾರಿ, ಮುಳುಗಿ ಚಿನ್ನ ಬೆಳ್ಳಿಯ ಕೊಡಲಿಗಳೆರಡನ್ನೂ ತೆಗೆದುಕೊಂಡು ಓಡಿಹೋದ.

"ಅಯ್ಯೋ....ನನ್ನ ಚಂದ್ರಾಯುಧ ಹೋಯಿತಲ್ಲೇ....." ಅಂತ ಶಿವ ರೇಗುತ್ತ ಕೂತ. "ಹಾಗೇ ಆಗಬೇಕು ನಿಮಗೆ. ತಮಗೆ ತಾವೇ ಸುಮ್ಮನಿರೋದು ಬಿಟ್ಟು ಬೇರೆಯವರು ಸುಳ್ಳು ಹೇಳ್ತಾರೆಯೇ ಇಲ್ಲವೇ ಅಂತ ನೋಡೋಕೆ ಏಕೆ ಹೋಗಬೇಕು ..." ಆದರೂ ಶಿವನ ರೋದನ ಕಮ್ಮಿಯಾಗಲಿಲ್ಲ. "ಸಾಕು ಬನ್ನಿ ಅಂದ್ರೆ....ಹೋದದ್ದು ಮೊನ್ನೆ ಭಕ್ತನೊಬ್ಬ ಕೊಟ್ಟ ಚಂದ್ರಾಯುಧ ತಾನೇ ...ಅದು ಗಿಲೀಟೆಂದು ಮರೆತುಬಿಟ್ಟಿರೇನೋ...."

ಶಿವ ಎದ್ದು ತೆಪ್ಪನೆ ತನ್ನ ಸತಿಯನ್ನು ಹಿಂಬಾಲಿಸಿ ನಡೆದ. ಕಟ್ಟಿಗೆಯವ ಕಟ್ಟಿಗೆ ಒಡೆದೇ ಜೀವಿಸುತ್ತಿದ್ದ.

**ನೀತಿ** :—೧ ಹಳದಿಯಾಗಿರುವುದೆಲ್ಲಾ ಚಿನ್ನವಲ್ಲ.

೨ ಉಜ್ಜ ನೋಡದೆ ಯಾವುದನ್ನೂ ಹೊತ್ತುಕೊಂಡು ಹೋಗಬಾರದು

— ಅಸುರ.







# ವೈಟೋಫೆರಿನ್

## (ಆಧುನಿಕ ಶಕ್ತಿವರ್ಧಕ ಟಾನಿಕ್)

★ ಇದರಲ್ಲಿ "ಎ" "ಬಿ" ಮತ್ತು "ಡಿ" ಎಂಬ ವೈಟವಿನ್ನುಗಳೂ, ಐರನ್, ಕ್ಯಾಲ್ಸಿಯಂ ಮುಂತಾದ ಲೋಹ ವಿಶೇಷಗಳೂ, ಶುದ್ಧಗೊಳಿಸಿದ ತಾಮ್ರವೂ, ಮತ್ತು ಮಾಲ್ಟ್‌ಸಾರ, ಜೇನುತುಪ್ಪಗಳನ್ನು ಸೇರಿಸಿ ತಯಾರಿಸಿದ ಒಂದು ಅಮೃತ ಪಾನ. ಇದರಲ್ಲಿ ದೇಹಶಕ್ತಿಗೆ ಬೇಕಾದ ಸಕಲ ಔಷಧಗಳ ಸಮೂಹವೂ ಇದೆ. ಖಾಯಿಲೆಯಿಂದ ಎದ್ದವರಿಗೂ, ಬಸುರಿ ಬಾಣಂತಿಯರ ದೇಹ ದಾರ್ಢ್ಯಕ್ಕೂ ಇದು ಅತ್ಯುತ್ತಮವಾದ ಔಷಧ. ಸೇವಿಸಲು ಬಹಳ ರುಚಿಯಾಗಿಯೂ ಮತ್ತು ಮಧುರವಾಗಿಯೂ ಇದೆ. ★



ತಯಾರಕರು :

**ದಿ ಮೈಸೂರು ಇಂಡಸ್ಟ್ರಿಯಲ್ ಅಂಡ್ ಟೆಸ್ಟಿಂಗ್ ಲ್ಯಾಬೋರಟರಿ, ಲಿಮಿಟೆಡ್**

**ಮಲ್ಲೇಶ್ವರಂ - - - ಬೆಂಗಳೂರು 3.**

## ಅವರ ಸುಖಜೀವನದ ಕಾರಣ




### ಜೀವಾಮೃತ

ಅವರೆಲ್ಲರ ಆರೋಗ್ಯವನ್ನು ಕಾಪಾಡುತ್ತಿದೆ. ದುಡಿದು ಬಳಲಿದ ತಂದೆಯನ್ನೂ, ರೋಗಾನಂತರ ಗುಣಮುಖಳಾಗುತ್ತಿರುವ ತಾಯಿಯನ್ನೂ, ಆರೋಗ್ಯಕರವಾದ ಪೋಷಣೆ ಬೇಕಾದ ಬೆಳೆಯುವ ಹುಡುಗನನ್ನೂ ಕಾಪಾಡುತ್ತಿದೆ.

★



Sole Distributors:
**Messrs. City Medical and General Agency, Bangalore City**

## ಚತುರ್ಥ ವಿಮಾಗಣನೆಯ ಫಲಿತಾಂಶ

1947 ರಿಂದ 1950 ರ ವರೆಗೆ

---

ತಾರೀಖು 31-12-1950 ಕ್ಕೆ ನಡೆಸಿದ ವಿಮಾಗಣನೆಯಲ್ಲಿ ಆಜೀವ ಮತ್ತು ಉಂಬಳಿ ವಿಮಾ ಪೋಲಿಸಿಗಳಿಗೆ

**ಸಾಲಿಯಾನ ಸಾವಿರಕ್ಕೆ**

ಅನುಕ್ರಮವಾಗಿ ರೂ 12/- ಮತ್ತು ರೂ. 9/- ರಂತೆ ಬೋನಸ್ಸನ್ನು ಘೋಷಿಸಿದೆ.



## ದಿ ಕೆನರಾ ಮ್ಯೂಚುವಲ್ ಎಶ್ಯೂರೆನ್ಸ್ ಕಂಪೆನಿ, ಲಿ.

ಪ್ರಧಾನ ಕಾರ್ಯಾಲಯ:
**ಉಡುಪಿ**, ದ ಭಾರತ



## The Canara Mutual Assurance Co., Ltd.,

Head Office: UDIPI
(S. India)

**ಸ್ಥಾಪನೆಯಾದ ಎಲ್ಲಾ ವರ್ಷಗಳಿಗೂ ಬೋನಸು ಹಂಚಿದ ಕಂಪೆನಿ.**




# ಕೊರವಂಜಿ

ಬಳೇಪೇಟೆ : : ಬೆಂಗಳೂರು 2

---

**ಬಿಡಿ ಪ್ರತಿ ಕೇವಲ ನಾಲ್ಕಾಣೆ**

**ವಾರ್ಷಿಕ ಚಂದಾ: ಕೇವಲ 3 ರೂ.ಗಳು (ಅಂಚೆ ವೆಚ್ಚ ಸಹಿತ)**

---

**ನಮ್ಮ ಹೊಸ ಮಾರಾಟಗಾರರು:**

**Sri H. R. SRINIVASAN,**
HOLALKERE.

**Sri F. S. SOPPI,**
ALNAWAR.

**Sri H. S. SURYANARAYANA,**
JOURNALIST, KADUR.

## ನಂಬಿಕೆಗೆ ಅರ್ಹತೆ!

- ★ ಅತ್ಯುತ್ತಮ ಟಾಯಿಲೆಟ್ ಸಾಬೂನಿನಲ್ಲಿ
- ★ ನೀವು ಏನೇನು ಗುಣಗಳನ್ನು
- ★ ಅಪೇಕ್ಷಿಸುವಿರೋ ಅವೆಲ್ಲಾ

# ಮೈಸೂರು ಸ್ಯಾಂಡಲ್ ಸೋಪಿನಲ್ಲಿ

ಇರುವುವು ಎಂದು ಖಚಿತವಾಗಿ ಹೇಳುತ್ತೇವೆ.



—: ಎಲ್ಲಾ ಕಡೆಗಳಲ್ಲೂ ದೊರಕುವುದು :—

**ಗೌರ್ನಮೆಂಟ್ ಸೋಪ್ ಫ್ಯಾಕ್ಟರಿ, ಬೆಂಗಳೂರು**

THE VENUS OF INDIAN SILVER SCREEN



MADHUBALA
PRESENTS HERSELF
WITH

- NASIRKHA
- PRATIMADEVI
- OM PRAKASH
- AGHA
- JAYANT
- CHANCHAL &
- CUCKOO

IN

# NAZNEEN

(An all India Pictures Production)

DIRECTION ·
N. K. ZIREE

MUSIC :
GULAM MOHAMAD

Shortly releasing simultaneously at your Favourite Theatres

**in Bangalore, Mysore, Mangalore and Davangere**

AWAIT

SADIQ PRODUCTIONS :
SAIYAN
WITH MADHUBALA



BAKSHI BROS.
KHAZANA
WITH MADHUBALA
MUSIC : C. RAMACHANDRA

## A TALLAM RELEASE

Printed by B. S. Iyengar, Bangalore City
Publisher—B. N. Gupta. Editor—M. Sivaram.